ಪ್ರಚಾರ ಪುಸ್ತಕಮಾಲೆ—೨೪೬

# ಪಾರ್ಶ್ವ ಪಂಡಿತ

ಡಾ. ಬಿ. ನಂ. ಚಂದ್ರಯ್ಯ




೧೯೮೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ, ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣ ವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು, ಓದಿ, ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಇನ್ನೂರ ನಲವತ್ತೆರಡು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಡಾ. ಬಿ. ನಂ. ಚಂದ್ರಯ್ಯ ಅವರ 'ಪಾರ್ಶ್ವ ಪಂಡಿತ' ಎಂಬ ಕೃತಿ ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

**ವೈ. ಪಿ. ರುದ್ರಪ್ಪ**
ಕುಲಪತಿ

# ಮೊದಲ ಮಾತು

ಭಾರತೀಯ ಸಾಹಿತ್ಯದಲ್ಲಿ, ಅದರಲ್ಲೂ ವಿಶೇಷವಾಗಿ ಪ್ರಾಕೃತ, ಅಪಭ್ರಂಶ, ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯದಲ್ಲಿ ಪಾರ್ಶ್ವನಾಥ ತೀರ್ಥಂಕರರ ಬಗೆಗೆ ವಿಪುಲವಾದ ಸಾಹಿತ್ಯ ಹೊರಬಂದಿದೆ. ಸಾಹಿತ್ಯಕೃತಿಗಳಲ್ಲಿ ಮಾತ್ರವಲ್ಲದೆ, ಪಾರ್ಶ್ವನಾಥ ತೀರ್ಥಂಕರರ ಪ್ರತಿಮೆಗಳನ್ನೊಳಗೊಂಡ ಅಸಂಖ್ಯಾತ ದೇವಾಲಯಗಳು, ಬಸದಿಗಳು ಮತ್ತು ಶಾಸನಗಳು ನಗರ-ಗ್ರಾಮಗಳೆನ್ನದೆ ಎಲ್ಲಕಡೆಯಲ್ಲಿಯೂ ದೊರಕುತ್ತವೆ. ನಾಗದೇವತೆಯ ಪ್ರಭಾವಳಿಯನ್ನುಳ್ಳ ಪಾರ್ಶ್ವನಾಥಸ್ವಾಮಿಯ ವಿಗ್ರಹಗಳು ಎಲ್ಲೆಲ್ಲಿಯೂ ಪೂಜೆಗೊಳ್ಳುತ್ತಿವೆ. ನೇಮಿ ತೀರ್ಥಂಕರರಾದ ಮೇಲೆ ೮೪,೭೫೦ ವರ್ಷಗಳ ಬಳಿಕ ಇವರ ಜನ್ಮಾವತಾರವಾಯಿತೆಂದೂ, ಭಗವಾನ್ ಮಹಾವೀರರಿಗಿಂತ ೨೫೦ ವರ್ಷಗಳಿಗಿಂತ ಮುಂಚೆ ಜೈನತತ ಪ್ರಚಾರ ಮಾಡಿದರೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ತಮ್ಮ ಕಾಲದಲ್ಲಿ ಪ್ರಚಾರದಲ್ಲಿದ್ದ ವೈದಿಕ ಧರ್ಮದ ಪ್ರಾಣಿಬಲಿಯಿಂದ ಕೂಡಿದ ಯಜ್ಞಯಾಗಾದಿಗಳನ್ನು ಪ್ರತಿಭಟಿಸಿ, ಕ್ರಿಮಿ-ಕೀಟಾದಿ ಸಮಸ್ತ ಪ್ರಾಣಿ ಜೀವಿಗಳಲ್ಲಿ ದಯೆತೋರಿ, ಕರ್ಮಕಾಂಡವನ್ನು ವಿರೋಧಿಸಿ ಜೀವದಯೆ, ಕರುಣೆಯಿಂದ ಕೂಡಿದ ಅಹಿಂಸಾ ತತ್ವದ ಬೋಧೆಯನ್ನು ಮಾಡಿ, ಜೈನಧರ್ಮದ ಹೆಗ್ಗಳಿಕೆಯನ್ನು ಪ್ರತಿಷ್ಠಾಪಿಸಿದರು. ಬುದ್ಧನು ಇವರ ತತ್ವಗಳಿಂದ ಪ್ರಭಾವಿತನಾಗಿ, ಪಾರ್ಶ್ವನಾಥರ ಕೇವಲ ನಾಲ್ಕು ಯಮಗಳಿಂದ ಕಲ್ಯಾಣವಾಗದೆಂದು ತಿಳಿದು 'ಸಮಾಧಿ' ಮತ್ತು 'ಪ್ರಜ್ಞೆಯನ್ನು' ಅದರೊಂದಿಗೆ ಸೇರಿಸಿ ಪ್ರಚಾರ ಮಾಡಿದನು. ಅಲ್ಲದೆ ನಿರ್ಗ್ರಂಥ ಶ್ರಮಣನಾದ ಬುದ್ಧನ ಚಿಕ್ಕಪ್ಪ 'ಬಪ್ಪ'ನು ಪಾರ್ಶ್ವಮತಾವಲಂಬಿಯಾಗಿದ್ದ

ನೆಂದು ಹೇಳುತ್ತಾರೆ. ಈ ಅಂಶಗಳನ್ನೆಲ್ಲ ಪರಿಭಾವಿಸಿ ಮೇಜರ್ ಜನರಲ್ ಫರ್ಲಾಂಗ್, ಡಾ. ಹರ್ಮನ್ ಜಾಕೋಬಿ, ಡಾ. ಚಾರ್ಲ್ಸ್ ಶಾರ್ಪೆಂಟಿಯರ್ ಮುಂತಾದ ವಿದ್ವಾಂಸರು ಪಾರ್ಶ್ವನಾಥ ತೀರ್ಥಂಕರರು ಐತಿಹಾಸಿಕ ವ್ಯಕ್ತಿಗಳಾಗಿದ್ದು ಜೈನ ಧರ್ಮ ತತ್ವ ಪ್ರಸಾರ ಮಾಡುವುದರ ಮೂಲಕ ಆ ಧರ್ಮದ ಶ್ರೇಷ್ಠತೆಯನ್ನು ಪ್ರತಿಷ್ಠೆಗೊಳಿಸಿ ಅದಕ್ಕೊಂದು ಸುಭದ್ರವಾದ ನೆಲೆಗಟ್ಟನ್ನು ಹಾಕಿದ ರೆಂದು ಹೇಳುತ್ತಾರೆ, ಅಂತೆಯೇ ಪಾರ್ಶ್ವನಾಥರು ನಾಡಿನಲ್ಲೆಲ್ಲ ಹರಿದಾಡಿ, ಹೋದಲ್ಲೆಲ್ಲಾ ಜೈನ ತತ್ವಬೋಧೆಯನ್ನು ಮಾಡಿದರು. ಆಗಿನ ಕಾಲದ ಸಮಾಜದ ಮೇಲೆ ಅತ್ಯಂತ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿ, ಜನಮನವನ್ನು ಬೆಳಗಿ, ಸಮಾಜದ ಕೊಳೆ ಯನ್ನು ತೊಳೆದು, ಜನತೆಯನ್ನು ಸನ್ಮಾರ್ಗದಲ್ಲಿ ಕೊಂಡೊಯ್ದು ಸ್ವರ್ಗದ ನೆರೆಮನೆಯಲ್ಲಿ ನಿಲ್ಲಿಸಿದರು. ಇಷ್ಟೊಂದು ಪ್ರಸಿದ್ಧರಾಗಿ, ಜನಪ್ರಿಯರಾಗಿದ್ದ ಮಹಾಪುರುಷಸಿಂಹರ ಜೀವನ ಚರಿತ್ರೆಯನ್ನು ಪಾರ್ಶ್ವಪಂಡಿತ ಅತ್ಯಂತ ವಿಸ್ತಾರವಾಗಿ, ಮೂಲದ ಕೆಲವು ಪ್ರಸಂಗ ಗಳನ್ನು ಕುಗ್ಗಿಸಿ, ಕೆಲವನ್ನು ಹಿಗ್ಗಲಿಸಿ, ಔಚಿತ್ಯಪೂರ್ಣವಾಗಿ ಬರೆದಿದ್ದಾನೆ. ಪಾರ್ಶ್ವಪಂಡಿತನ 'ಪಾರ್ಶ್ವನಾಥ ಪುರಾಣದ' ಸ್ಥೂಲ ಪರಿಚಯುವನ್ನು ಇಲ್ಲಿ ಕೊಡಲಾಗಿದೆ. ಹಾಗೆಯೇ ಈತನು ರಘುವಂಶದ ಅರಸರು ಕೊಟ್ಟ ದಾನದ ವಿಷಯುವನ್ನು ಹೇಳುತ್ತ ಆ ವಂಶದ ಕೆಲವು ರಾಜ-ರಾಣಿಯರ ಸ್ಥೂಲಚಿತ್ರವನ್ನು ಕೊಡುವ ಕಲ್ಬೊಳೆ ಶಾಸನವನ್ನು ಬರೆದಿದ್ದಾನೆ. ಅದರ ಪರಿಚಯುವನ್ನು ಈ ಪುಸ್ತಿಕೆಯಲ್ಲಿ ನೀಡಲಾಗಿದೆ.

ಈ ಪುಸ್ತಿಕೆಯನ್ನು ಸಿದ್ಧಪಡಿಸಲು ಅವಕಾಶ ಮಾಡಿಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕ ರಾದ ಶ್ರೀ ಕೆ. ಟಿ. ವೀರಪ್ಪ ಇವರಿಗೆ ನನ್ನ ಕೃತಜ್ಞತೆಗಳು.

**ಬಿ. ನಂ. ಚಂದ್ರಯ್ಯ**

# ಪರಿವಿಡಿ

# ಜೀವನ ಚಿತ್ರ

ಪಾರ್ಶ್ವಪಂಡಿತನು 'ಪಾರ್ಶ್ವನಾಥಪುರಾಣ' ಎಂಬ ೧೬ ಆಶ್ವಾಸಗಳನ್ನುಳ್ಳ ಚಂಪೂಕಾವ್ಯ ಹಾಗೂ ಕಲ್ಲೊಳೆ 'ಶಾಸನ'ವನ್ನು ರಚಿಸಿದ್ದಾನೆ. ಈ ಎರಡು ರಚನೆಗಳಲ್ಲೂ ತನ್ನ ಜೀವನ ಚರಿತ್ರೆಗೆ ಸಂಬಂಧಿಸಿದಂತೆ ಅನೇಕ ವಿಷಯಗಳನ್ನು ಹೇಳಿಕೊಂಡಿದ್ದಾನೆ .

> ಲೋಕಣನಾಯಕಂ ವಿಬುಧಲೋಕನುತಂ ಪಿತೃ ಕಾಮಿಯಕ್ಕನ
> ವ್ಯಾಕುಳಶೀಲೆ ತಾಯ್ ತನಗೆ ನಾಗಣನುತ್ತಮಭೋಗನಗ್ರಜಂ
> ಶ್ರೀ ಕುಮುದೇಂದು ನಿರ್ಮಳಯಶಃ ಪ್ರಸರಂ ಗುರು ವಾಸುಪೂಜ್ಯನಾ
> ತ್ಮೀಕೃತತತ್ತ್ವನಾಗಿ ನೆಗಟ್ದಂ ಗುಣಮಂಡನ ಪಾರ್ಶ್ವಪಂಡಿತಂ ೧–೯೧

ಎಂದು ತನ್ನ ಪಾರ್ಶ್ವನಾಥ ಪುರಾಣದಲ್ಲಿ ಹೇಳಿಕೊಂಡಿದ್ದಾನೆ. ಇದರ ಪ್ರಕಾರ, ಈತನ ತಂದೆ ಲೋಕಣನಾಯಕ, ತಾಯಿ ಕಾಮಿಯಕ್ಕ; ಅಣ್ಣನಾಗಣ; ಗುರು ಶ್ರೀ ಕುಮುದೇಂದು ಮುನಿಯ ಯಶಃಪ್ರಸರನಾದ ವಾಸುಪೂಜ್ಯ. ಈ ಪದ್ಯದಲ್ಲಿ ತನ್ನ ತಂದೆಯು 'ವಿಬುಧ ಲೋಕನುತಂ' ಎಂದಿರುವುದರಿಂದ ಆತನು ಬಹುದೊಡ್ಡ ವಿದ್ವಾಂಸನಾಗಿದ್ದಿರಬೇಕು. ತಾಯಿ 'ಅವ್ಯಾಕುಳ ಶೀಲೆ', ಅಣ್ಣ 'ಉತ್ತಮಭೋಗನ್,' ಗುರು 'ನಿರ್ಮಳಯಶಃ ಪ್ರಸರಂ' ಆದುದರಿಂದ ವಿದ್ವಾಂಸನೂ ಪುಣ್ಯವಂತಳೂ ಆದ ತಂದೆ-ತಾಯಿಗಳ ಮಗನಾಗಿ ಹುಟ್ಟಿ, ಶ್ರೀಮಂತ ಮನೆತನದಲ್ಲಿ ಬೆಳೆದು, ಸುಪ್ರಸಿದ್ಧ ಗುರುಗಳನ್ನು ಹೊಂದಿದ ಪಾರ್ಶ್ವಪಂಡಿತನು ಗುಣಮಂಡಿತನಾಗಿ ಬೆಳೆದುದರಲ್ಲಿ ಆಶ್ಚರ್ಯವಿಲ್ಲ. ಈತನು ಕೂಡ ಪಂಪ ಮುಂತಾದ ಕವಿಗಳನ್ನನುಸರಿಸಿ ತನ್ನ ಬಿರುದುಗಳನ್ನು ಹೇಳಿಕೊಂಡಿದ್ದಾನೆ. 'ಸುಕವಿ ಜನಮನೋಹರ್ಷ ಸಸ್ಯ ಪ್ರವರ್ಷಂ,' 'ವಿಬುಧ ಜನಮನಃ ಪದ್ಮಿನೀ ಪದ್ಮಮಿತ್ರಂ,'

'ಕವಿಕುಳತಿಳಕಂ' ಎಂದು ಮುಂತಾಗಿ ತನ್ನ ಬಿರುದುಗಳನ್ನು ಹೇಳಿಕೊಂಡಿದ್ದಾನೆ. ಆತನ ಆಶ್ರಯದಾತ ಅಥವಾ ಆಸ್ಥಾನದ ವಿದ್ವಾಂಸರು ಈತನಿಗೆ ಈ ಬಿರುದುಗಳನ್ನು ಕೊಟ್ಟಿರಬಹುದು. ಇದಕ್ಕೆ ಕಾವ್ಯದಲ್ಲಿ ಅಲ್ಲಲ್ಲಿ ಆಧಾರಗಳು ದೊರೆಯುತ್ತವೆ.

## ಆಶ್ರಯ ಮತ್ತು ದೇಶ

ಪಂಪಾದಿ ಕವಿಗಳಂತೆ ಪಾರ್ಶ್ವಪಂಡಿತನೂ ತನ್ನ ಕಾವ್ಯದಲ್ಲಿ ಕಥಾನಾಯಕನೊಂದಿಗೆ ತನಗೆ ಆಶ್ರಯ ನೀಡಿದ ರಾಜನನ್ನು ಸಮೀಕರಿಸಿರುವುದು ಕಂಡುಬರುತ್ತದೆ. ಕವಿಯು ತನ್ನ ಪೋಷಕನಾದ ಸೌಂದತ್ತಿಯ ರಟ್ಟವಂಶದ ಕಾರ್ತವೀರ್ಯನ ಇಚ್ಛೆಯಂತೆ 'ಪಾರ್ಶ್ವನಾಥಪುರಾಣ'ವನ್ನು ಬರೆದು. ಆಸ್ಥಾನದಲ್ಲಿ ಓದಿ ಬಿರುದುಗಳನ್ನು ಪಡೆದನೆಂದೂ. ಕೇತಕೀಕುಸುಮವನ್ನು ವರ್ಣಿಸುವಾಗ ಕಥಾ ನಾಯಕ ರಾಜನನ್ನು ಆಶ್ರಿತನಾದ ರಾಜನೊಂದಿಗೆ ಹೋಲಿಸಿ ಅಭಿನ್ನರೆಂದು ವರ್ಣಿಸಿರುವನೆಂದೂ. ಪೂರ್ವಕವಿ ಸಂಪ್ರದಾಯದಂತೆ 'ಕವಿರಾಜಶೇಖರಂ.' 'ಸಹಜ ಸಾಹಿತ್ಯ ವಿದ್ಯಾಧರಂ' ಎಂಬ ಬಿರುದುಗಳನ್ನು ಪಾರ್ಶ್ವಪಂಡಿತನು. ಕಥಾನಾಯಕನಿಗೆ ಆ ಮೂಲಕ ತನ್ನ ಪೋಷಕನಿಗೆ ಆರೋಪಿಸಿ ಹೇಳಿರುವನೆಂದೂ ಎಲ್. ಶೇಷಯ್ಯಂಗಾರ್ ಅಭಿಪ್ರಾಯಪಟ್ಟಿದ್ದಾರೆ. ಕವಿಯು ತನ್ನ ಕಾವ್ಯದ ಕೊನೆಯಲ್ಲಿ ರಟ್ಟವಂಶದ ರಾಜನ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ:

> ವೀರ ಶ್ರೀನಿಧಿಕಾರ್ತವೀರ್ಯತನಯಂ ಶ್ರೀ ಲಕ್ಷ್ಮಣ ಕ್ಷೋಣಿಪ
> ಕ್ಷೀರಾಂಭೋನಿಧಿ[ಜಾತ ಚಂದ್ರನೆನಿಪಾ ಶ್ರೀ]ಕಾರ್ತವೀರ್ಯಂ ಕಳಾ
> ಧಾರಂ ಸಜ್ಜನ ಸೌಖ್ಯಕಾರಿಸುಚರಿತ್ರಂ ಲೋಕನೇತ್ರಂ ಸುಧಾ
> ಕಾರಂ.........ನೊಗಯಿಪಂ ಶ್ರೀ ಚಂದ್ರಿಕಾನಂದನಂ ೧೬-೧೮೨

ಪೊಗರಂಭೋರುಹಸಂಭವಂ ಬರೆದತಿಸ್ಪಷ್ಟಾಕ್ಷರಶ್ರೇಣಿ ಸಾ
ಕ್ಷಿಗಳಾಶಾಧಿಪರಾಜರಾಜಿಸುವುದಂ ವಾಚಾಳಭೂಪಾಳಕರ್
ಜಗದೊಳ್ ಬಕ್ಕ್ಯಾಗಡಿ ಮಾತದಂತಸಿಲತೋದ್ಯತ್ಛತ್ರಮಂ ತೋಱಿ ನೆ
ಟ್ಟಗೆ ರಟ್ಟಾನ್ವಯ ಕಾರ್ತವೀರ್ಯನಖಿಳೋರ್ವೀಭಾಗ್ಯವಂ
ಭೋಗಿಪಂ ೧೬–೧೮೩

ಶ್ರೀ ಕಾರ್ತವೀರ್ಯ ನೃಪಲ
ಕ್ಷ್ಮೀ ಕವಿ........ವಿನೇಯೂ
ನೀಕಶಿರೋಮಣಿ ನೆಗಟ್ದಂ
ಲೋಕಪ್ರಿಯಜಾತಕೀರ್ತಿ ಕವಿಕುಳ ತಿಲಕಂ ೧೬–೧೮೪

ಮೇಲಿನ ಈ ಮೂರು ಪದ್ಯಗಳಲ್ಲಿ ರಟ್ಟವಂಶದ ಪ್ರಸಿದ್ಧರಾದ ಮೂವರು ರಾಜರ ಹೆಸರುಗಳು ಬಂದಿವೆ. ಅವರಲ್ಲಿ ಮೊದಲನೆಯವನು ವೀರ ಶ್ರೀನಿಧಿಯೆನಿಸಿದ ಕಾರ್ತವೀರ್ಯ. ಇವನ ತನಯ ಶ್ರೀ ಲಕ್ಷ್ಮಣ ಕ್ಷೋಣಿಪ. ಈತನ ಹೆಂಡತಿ ಚಂದ್ರಿಕಾದೇವಿ. ಇವರಿಬ್ಬರ ಮಗ 'ಕಳಾಧಾರಂ ಸಜ್ಜನ ಸೌಖ್ಯಕಾರಿ ಸುಚರಿತ್ರಂ ಲೋಕನೇತ್ರಂ ಶುಭಾಕಾರಂ' ಎಂದು ಪ್ರಸಿದ್ಧನಾದ ಕಾರ್ತವೀರ್ಯ. ಈ ರಾಜನೇ ಕವಿಯ ಪೋಷಕನಾಗಿದ್ದು ಆತನ ಕಾಲದಲ್ಲಿ ರಟ್ಟ ರಾಜ್ಯವನ್ನು ಆಳುತ್ತಿದ್ದವನು. ರಟ್ಟವಂಶದಲ್ಲಿ ಇವನಲ್ಲದೆ ಇನ್ನು ಮೂವರು ಕಾರ್ತವೀರ್ಯರು ಆಳುತ್ತಿದ್ದಂತೆ ತಿಳಿದುಬರುತ್ತದೆ. ಜೈನಧರ್ಮಕ್ಕೆ ಸೇರಿದ ಈ ರಾಜರ ವಂಶಾವಳಿಯನ್ನು ಶಾಸನಗಳ ಆಧಾರದ ಮೇಲೆ ಈ ರೀತಿ ರೂಪಿಸಬಹುದು. ಪೃಥ್ವಿವರ್ಮ— ಶಾಂತಿವರ್ಮ—ಕಾರ್ತವೀರ್ಯ I —ಅಂಕ—ಕಾರ್ತವೀರ್ಯ II—ಸೇನ—ಕಾರ್ತವೀರ್ಯ III—ಲಕ್ಷ್ಮೀದೇವ +(ಹೆಂಡತಿ ಚಂದ್ರಿಕಾದೇವಿ)—ಕಾರ್ತವೀರ್ಯ IV + ಮಲ್ಲಿಕಾರ್ಜುನ, ಕಾರ್ತವೀರ್ಯ IV — ಲಕ್ಷ್ಮೀದೇವ II.

ಈ ವಂಶವೃಕ್ಷದಲ್ಲಿಯ ಮೂರನೆಯ ಕಾರ್ತವೀರ್ಯ, ಅವನ ಮಗ ಲಕ್ಷ್ಮೀದೇವ ಮತ್ತು ಇವನ ಮಗ ನಾಲ್ಕನೆಯ ಕಾರ್ತವೀರ್ಯ ಇವರನ್ನು ಪಾರ್ಶ್ವಪಂಡಿತನು ತನ್ನ ಕಾವ್ಯದಲ್ಲಿ ಉಲ್ಲೇಖಿಸಿದ್ದಾನೆ. ಇವರಲ್ಲಿ ಲಕ್ಷ್ಮೀದೇವನು (ಪ್ರಥಮ) ಅಥವಾ ಲಕ್ಷ್ಮಣರಾಜನು ಕ್ರಿ.ಶ. ಸು. ೧೨೦೮ರಲ್ಲಿ ಆಳುತ್ತಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ತಂದೆಯು ಇನ್ನೂ ರಾಜ್ಯಾಡಳಿತ ಸೂತ್ರವನ್ನು ಹಿಡಿದಿದ್ದಾಗಲೇ ಕವಿಯ ಪೋಷಕನಾದ ನಾಲ್ಕನೆಯ ಕಾರ್ತವೀರ್ಯನು ಯುವರಾಜನಾಗಿ ಆಳುತ್ತಿದ್ದನೆಂದೂ ತಿಳಿದುಬರುತ್ತದೆ. ಈತನು ಪಾರ್ಶ್ವ ಪಂಡಿತನಿಂದ 'ಪಾರ್ಶ್ವನಾಥಪುರಾಣ'ವನ್ನು ಬರೆಸಿದ್ದಂತೆಯೇ, ಇವನ ತಂದೆ ಲಕ್ಷ್ಮಣದೇವನೂ ಕವಿಕುಂಜರನೆನಿಸಿದ ನೇಮಿಚಂದ್ರನ ಪೋಷಕನಾಗಿದ್ದು ಅವನಿಂದ 'ಲೀಲಾವತಿ' ಕಾವ್ಯವನ್ನು ಬರೆಸಿದ್ದಾನೆ. ನೇಮಿಚಂದ್ರನು ತನ್ನ ಪೋಷಕನಾದ ಲಕ್ಷ್ಮಣದೇವನನ್ನು 'ರೂಪಕಂದರ್ಪ' ಎಂದು ಹೇಳಿರುವುದಲ್ಲದೆ ರಾಣಿಯಾದ ಚಂದಲದೇವಿಯನ್ನು ಬಹಳವಾಗಿ ಸ್ತುತಿಸಿದ್ದಾನೆ. ಪಾರ್ಶ್ವಪಂಡಿತನು ಕೂಡ ವಜ್ರನಾಭಿಗೆ 'ರೂಪಕಂದರ್ಪ' ಎಂಬ ವಿಶೇಷಣವನ್ನು ಬಳಸಿದ್ದಾನೆ. ಇದೇ ರೀತಿ ಈತನು ಬರೆದಿರುವ ಶಾಸನ (೧೨೦೫)ದಲ್ಲಿ ಬರುವ 'ರೂಪಕಂತು' ಎಂಬ ವಿಶೇಷಣವೂ ಲಕ್ಷ್ಮಣದೇವನಿಗೆ ಅನ್ವಯವಾಗುತ್ತದೆ ಎಂದು ಎಂ. ಗೋವಿಂದರಾವ್ ಮತ್ತು ಎಂ. ಮರಿಯಪ್ಪಭಟ್ಟ ಅವರು ಹೇಳುತ್ತಾರೆ. ಆದ್ದರಿಂದ ಕವಿ ಇಲ್ಲಿ ವರ್ಣಿಸಿರುವ ವಜ್ರನಾಭಿ ಲಕ್ಷ್ಮೀಧರನೇ ಎಂದು ಸ್ಪಷ್ಟವಾಗುತ್ತದೆ. ಅವನ ಶಾಸನದ ಪದ್ಯ ಈ ರೀತಿ ಇದೆ:

ಶ್ರೀಪತಿ ಲಕ್ಷ್ಮೀದೇವ ಮಹಿವಲ್ಲಭವಲ್ಲಭೆ ಕಾರ್ತವೀರ್ಯ ಧಾ
ತ್ರೀಪತಿ ಮಲ್ಲಿಕಾರ್ಜುನ ಮಹೀಶರ ಮಾತೃ ಮಹಾಸತೀತ್ವ ❧

ತೋಪಮೆ ಜೈನಪೂಜನಸುರೇಂದ್ರವಧೂಪಮೆ ರೂಪಕಂತುಕಾಂ
ತೋಪಮೆ ರಂಜಪಳ್ಳಿಗೆಟ್ಟ ಚಂಗಲದೇವಿ ಸಮಸ್ತಧಾತ್ರಿಯೊಳ್ ॥

ವಜ್ರನಾಭಿಯನ್ನು ಲಕ್ಷ್ಮೀಧರನಿಗೆ ಹೋಲಿಸಿದ ಕವಿ ಮುಂದಿನ ಭವದ ಆನಂದನನ್ನು ಲಕ್ಷ್ಮೀಧರನ ಪುತ್ರನಾದ ಕಾರ್ತವೀರ್ಯ ನೊಡನೆ ಹೋಲಿಸಿರುವುದು ಔಚಿತ್ಯಪೂರ್ಣವಾಗಿದೆ. ಪಾರ್ಶ್ವ ನಾಥ ಪುರಾಣದಲ್ಲಿ ಬರುವ ಈ ಪದ್ಯ ಈ ರೀತಿ ಇದೆ:

ವಿತತಕಳಾವಿಳಸಿತನ
ಪ್ರತಿಮಮಹಾಮಂಡಳೇಶ್ವರತ್ವಮನಾಂತು
ನ್ನತಿಗೆಡೆಯಾದಂ ಕುವಳಯ
ಹಿತಕರನಾನಂದರಾಜನೂರ್ಜಿತ ತೇಜಂ ೧೩–೩

'ಮಹಾಮಂಡಲೇಶ್ವರ' ಎಂಬುದು ರಟ್ಟವಂಶದ ರಾಜರ ಬಿರುದುಗಳಲ್ಲಿ ಒಂದು. ಆ ಬಿರುದನ್ನು ಕವಿ ಇಲ್ಲಿ ಆನಂದನಿಗೆ ಕೊಟ್ಟಿದ್ದಾನೆ. ಹದಿಮೂರನೆಯ ಆಶ್ವಾಸದ ೪೨ನೇ ಪದ್ಯದಲ್ಲಿ ಆನಂದನು ಜಿನಗೃಹವನ್ನು ಎತ್ತಿಸಿದ ವಿಷಯವಿದೆ.

ಪುರುಷಾರ್ಥನಿಧಿ ಶಲಾಕಾ
ಪುರುಷತೆಯಂ ಮಾಳ್ಪ ಪುಣ್ಯರಾಶಿಗಳೆಂಬಂ
ತಿರೆ ಸೊದೆವಳಿದ ಶಲಾಕೆಯ
ಪರಮಜಿನಾಲಯಮನಟ್ಟಿಯಿಂದೆತ್ತಿಸಿದಂ ೧೩–೪೨

ಈ ಜಿನಾಲಯವನ್ನು ಕವಿ ಮೂರು ವೃತ್ತಗಳಲ್ಲಿ (೧೩–೪೩ ೪೪, ೪೫) ವಿಶೇಷವಾಗಿ ವರ್ಣಿಸುತ್ತ ಈ ಜಿನಾಲಯವು 'ಪಾರ್ಶ್ವ ಪಂಡಿತ ವಿನಿರ್ಮಿತ ಕಾವ್ಯದಂತೆ' ವಿಶ್ವಧಾತ್ರಿಯೊಳ್ ಪೆಸ ರ್ವೆತ್ತುದು ಎಂದು ಹೇಳಿದ್ದಾನೆ. ಈತನಿಂದಲೇ ರಚಿತವಾದ ಶಾಸನವೊಂದರಲ್ಲಿ ಒಂದು ಶಾಂತಿನಾಥ ಜಿನಾಲಯದ ಪ್ರಸ್ತಾಪ ವಿದೆ. ಅದರ ಜೀರ್ಣೋದ್ಧಾರಕ್ಕೂ ದೇವರ ಅಂಗಭೋಗ ರಂಗ

ಭೋಗಗಳಿಗೂ, ಅಲ್ಲಿರುವ ಮುನಿಜನರ ಆಹಾರ ಭೈಷಜ್ಯಾದಿ ಗಳಿಗೂ ಶಕವರ್ಷ ೧೧೨೭ರಲ್ಲಿ ಶ್ರೀಕಾರ್ತವೀರ್ಯದೇವನು ಉಂಬಳಿಗಳನ್ನು ಬಿಟ್ಟಂತೆ ಅದರಲ್ಲಿ ಹೇಳಿದೆ. ಆದುದರಿಂದ ಕವಿಯು ಆ ಶಾಂತಿನಾಥ ಜಿನಾಲಯುವನ್ನೇ ಮನಸ್ಸಿನಲ್ಲಿಟ್ಟು ಕೊಂಡು ತನ್ನ ಕಾವ್ಯದಲ್ಲಿ ಜಿನಾಲಯುವನ್ನು ವರ್ಣಿಸಿರುವಂತೆ ತೋರುತ್ತದೆ. ಅದರ ಜೀರ್ಣೋದ್ಧಾರ ಕಾರ್ಯದಲ್ಲಿ ನೆರವಾಗಿ. ಪುಣ್ಯಭಾಜನನಾದ ಕವಿ ಪಾರ್ಶ್ವನಾಥ ಪುರಾಣವನ್ನು ಬರೆದು ಕೀರ್ತಿಯುನ್ನು ಸಂಪಾದಿಸಿಕೊಂಡನು. ನಾಗಚಂದ್ರನಂತೆ 'ನಿಜ ವಿಭವೋದಯ'ವನ್ನು ಸಫಲಮಾಡಿಕೊಂಡನು. ನಾಗಚಂದ್ರನು 'ಮುನಿನಾಥಂ ದಶಧರ್ಮಧಾರಿ' ಎಂದು ಹೇಳಿರುವಂತೆ ಈತನೂ 'ದಶಧರ್ಮಧಾರಿ'ಯೊಬ್ಬನ ಪ್ರಸ್ತಾಪ ಮಾಡಿರುವುದರಿಂದ ಇಬ್ಬರೂ ಒಬ್ಬರೇ ಎಂದು ತೋರುತ್ತದೆ. ಇದರಿಂದ ನಾಗಚಂದ್ರನ ಪ್ರಭಾವ ಪಾರ್ಶ್ವಪಂಡಿತನಮೇಲೆ ಗಾಢವಾಗಿ ಆಗಿರುವುದು ಕಂಡು ಬರುತ್ತದೆ. ಮತ್ತೊಂದು ಹೊಸ ವಿಷಯುವೆಂದರೆ ಕನ್ನಡದಲ್ಲಿ 'ಮಣಿಪ್ರವಾಳ' ಶೈಲಿಯುನ್ನು ಕುರಿತ ಗ್ರಂಥದ ಪ್ರಸ್ತಾಪ. ಇದು ವರೆಗೆ ಮಲೆಯಾಳಂನಲ್ಲಿ ಮಾತ್ರವಿತ್ತೆಂದು ಹೇಳುತ್ತಿದ್ದರು. ಇಂಥ ಶೈಲಿಯ ಗ್ರಂಥವೊಂದನ್ನು ಅಗ್ಗಳಕವಿಯು ಬರೆದಿದ್ದಾನೆ ಎಂಬ ಅಂಶವನ್ನು ಈ ಪದ್ಯದಲ್ಲಿ ಹೇಳುತ್ತಾನೆ:

ವಾಸ್ತವ ಭಕ್ತಿಯುತಂ ರೂ
ಪಸ್ತವನ ಮಣಿಪ್ರವಾಳಮಂ ಜಿನನಾಸ್ಥಾ
ನ ಸ್ತವನಮನೊದವಿಸಿ ಭುವ
ನಸ್ತುತನಾದಗ್ಗಳಂಗಮಗ್ಗಳರೊಳರೇ ೧–೨೨

ಆದರೆ ಈ ಗ್ರಂಥ ಇನ್ನೂ ದೊರೆತಿಲ್ಲ. ಕೆಲವುಕಡೆ ಪಾರ್ಶ್ವ ಪಂಡಿತನ ಶೈಲಿಯುನ್ನು ನೋಡಿದರೆ ಮಣಿಪ್ರವಾಳದ ನೆನಪಾಗದೇ

ಇರುವುದಿಲ್ಲ. ಹೀಗೆಯೇ ಅನೇಕ ಕವಿಗಳ ಪ್ರಭಾವ ತನ್ನ ಮೇಲಾಗಿರುವುದನ್ನು ಧಾರಾಳವಾಗಿ ಹೇಳಿಕೊಂಡಿದ್ದಾನೆ.

## ಕಾಲ

ಮೇಲಿನ ನಿರೂಪಣೆಯಿಂದ ಈತನು ೧೩ನೇ ಶತಮಾನದ ಪೂರ್ವಾರ್ಧವಲ್ಲಿದ್ದ ಕವಿ ಎಂಬುದರಲ್ಲಿ ಅನುಮಾನವಿಲ್ಲ. ಅವನ ಶಾಸನದಲ್ಲಿಯೇ ಅವನ ಕಾಲದ ಬಗ್ಗೆ ಉಲ್ಲೇಖ ದೊರೆಯುತ್ತದೆ. ತನ್ನ ಕಾವ್ಯದ ಕೊನೆಯಲ್ಲಿ ಈ ರೀತಿ ಹೇಳಿಕೊಂಡಿದ್ದಾನೆ:

> ಶಕವರ್ಷ ಚತುರಬ್ಧಿ ಚಂದ್ರ ಶಶಿ ಸಂಖ್ಯಂ ಚಿತ್ರಭಾನೂತ್ಥ ಕಾ
> ರ್ತಿಕ ಶುದ್ಧೋದಿತ ಪಂಚಮೀ ಧಿಷಣವಾರಂ ಪೂಣ್ಕೆ 'ಸಂಪೂರ್ಣಮಾ
> ಯ್ತು ಕವಿ ಪ್ರಸ್ತುತ ಪಾರ್ಶ್ವನಾಥ ಚರಿತಂ ಪಾರ್ಶ್ವೋದಿತಂ ಕೂಡೆ ಸ
> ರ್ತಿಕೆ ತತ್ಕೀರ್ತಿವೊಲೂರ್ಜಿತಾರ್ಥ [ವಿಲಸತ್ಕಾವ್ಯಂ ಧರಾಭಾಗದೊಳ್]
>
> ೧೬–೧೮೫

'ಅಂಕಾನಾಂ ವಾಮತೋ ಗತಿಃ' ಎಂಬ ಸೂತ್ರಾನುಸಾರವಾಗಿ ಇಲ್ಲಿ ಶಕ ೧೧೪೪ ಎಂಬ ಸಂಖ್ಯೆಯು ಸಿದ್ಧವಾಗಿ ಚಿತ್ರಭಾನು ಸಂವತ್ಸರ ಮತ್ತು ಇತರ ವಿವರಗಳ ಗುಣಿತದಿಂದ ಇದು ಕ್ರಿ.ಶ. ೧೨೨೨ ಎಂದು ತಿಳಿಯುತ್ತದೆ. ಇದು 'ಪಾರ್ಶ್ವನಾಥ ಪುರಾಣ'ದ ರಚನೆಯ ಕಾಲ.

ಪಾರ್ಶ್ವಪಂಡಿತನು ಬರೆದಿರುವ ಶಾಸನವು, 'ಶಕವರ್ಷಂ ೧೧೨೭ನೆಯ ರಕ್ತಾಕ್ಷಿ ಸಂವತ್ಸರದ ಪೌಷ್ಯ ಶುದ್ಧ ಬಿದಿಗೆ ಶನಿವಾರ ದಂದುತ್ತರಾಯಣ ಸಂಕ್ರಮಣದಲ್ಲಿ' ಸಿದ್ಧವಾದಂತೆ ತಿಳಿಯುವುದರಿಂದ ೧೨೦೫ರಲ್ಲಿ ಅಂದರೆ ಪಾರ್ಶ್ವನಾಥ ಪುರಾಣವು ರಚಿತವಾಗುವುದಕ್ಕೆ ೧೭ ವರ್ಷಗಳ ಪೂರ್ವದಲ್ಲಿ ಇದನ್ನು ಈ ಕವಿಯು

ಬರೆದನೆಂದು ತಿಳಿಯುತ್ತದೆ. ಇದು ಆರ್. ನರಸಿಂಹಾಚಾರ್ ಮುಂತಾದ ವಿದ್ವಾಂಸರ ಅಭಿಪ್ರಾಯ. ಆದುದರಿಂದ ಪಾರ್ಶ್ವ ಪಂಡಿತನ ಕಾಲವನ್ನು ಸು. ೧೨೦೫–೧೨೨೨ ಎಂದು ಸ್ಥೂಲವಾಗಿ ಇಟ್ಟುಕೊಳ್ಳಬಹುದು.

## ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ

'ಪಾರ್ಶ್ವನಾಥಪುರಾಣ'ವನ್ನು ಬರೆದಿರುವ ಈ ಪಾರ್ಶ್ವಪಂಡಿತನು ಒಂದು ಶಾಸನವನ್ನು ಬರೆದಿದ್ದಾನೆ. ಕಲ್ಹೊಳೆಯಲ್ಲಿ ಈ ಶಾಸನ ಸಿಕ್ಕಿರುವುದರಿಂದ ಇದನ್ನು ಕಲ್ಹೊಳೆಯ ಶಾಸನ ಎಂದು ಕರೆಯಲಾಗಿದೆ. ಇದರಲ್ಲಿ ಕಂದ, ವೃತ್ತ, ಗದ್ಯ ಹಾಗೂ ಅನುಷ್ಟುಪ್ ಪದ್ಯಗಳು ಬಂದಿರುವುದರಿಂದ ಇದನ್ನು ಚಂಪೂರೂಪದಲ್ಲಿ ಬರೆದಿರುವ ಶಾಸನ ಎಂದು ಕರೆಯಬಹುದು. ಅಂತೆಯೆ ಇದರಲ್ಲಿ ಸಂಸ್ಕೃತ ಭೂಯಿಷ್ಠವಾದ ಪ್ರೌಢ ಬಂಧುರಶೈಲಿ ಹಾಗೂ ಅಲಂಕಾರಗಳ ನೈಪುಣ್ಯತೆಯನ್ನು ಗಮನಿಸಬಹುದು. ಸುಮಾರು ಒಂದುನೂರು ವರ್ಷಗಳ ಹಿಂದೆ ಡಾ॥ ಫ್ಲೀಟ್ ಅವರು ಈ ಶಾಸನವನ್ನು ಸಂಪಾದಿಸಿ Jbbras ೧೦ನೇ ಸಂಪುಟದಲ್ಲಿ ಪ್ರಕಟಿಸಿದ್ದರು. ಇದನ್ನು ಪುನಃ ಸಂಸ್ಕರಿಸಿ ಶ್ರೀ ಆರ್. ಎನ್. ಗುರುವ ಅವರು ಕರ್ನಾಟಕ ಭಾರತಿ—ಸಂಪುಟ ೬. ಸಂಚಿಕೆ ೩. ೧೯೭೪ ಜನವರಿಯ ತ್ರೈಮಾಸಿಕದಲ್ಲಿ ಮತ್ತೆ ಪ್ರಕಟಿಸಿದ್ದಾರೆ.

ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನಲ್ಲಿರುವ ಈಗಿನ 'ಕಲ್ಹೋಳಿ'ಗ್ರಾಮವೇ ಅಂದಿನ ಕಲ್ಹೊಳೆ. ಗೋಕಾಕದಿಂದ ಈಶಾನ್ಯಕ್ಕೆ ಸುಮಾರು ಎಂಟು ಮೈಲಿ ದೂರದಲ್ಲಿದೆ. ಈ ಶಾಸನವನ್ನು ಈಗ ಪಾರ್ಶ್ವನಾಥ ಬಸದಿಯ ಗೋಡೆಯಲ್ಲಿ ಕಟ್ಟಲಾಗಿದೆ.

ಪ್ರಕೃತಿಯು ಯಾವ ಆಘಾತಕ್ಕೂ ಒಳಗಾಗದೆ ಸುಸ್ಥಿತಿಯಲ್ಲಿದೆ. ಅಕ್ಷರಗಳು ಸುಂದರವಾಗಿದ್ದು ಕನ್ನಡ ಭಾಷೆ ಮತ್ತು ಲಿಪಿಯಲ್ಲಿವೆ. ಆದರೆ ಇದರ ಮೊದಲಿನ ಮಂಗಳ ಪದ್ಯ ಮತ್ತು ಕಡೆಯ ಐದು ಫಲಶ್ರುತಿ ಪದ್ಯಗಳು ಸಂಸ್ಕೃತದಲ್ಲಿವೆ. ಇದರಲ್ಲಿ ಒಟ್ಟು ೪೬ ಪದ್ಯಗಳಿವೆ. ಅವುಗಳಲ್ಲಿ ೧, ೪೨, ೪೩, ೪೪ ಈ ನಾಲ್ಕು ಅನುಷ್ಟುಪ್ ಛಂದಸ್ಸಿನಲ್ಲಿವೆ. ೨, ೩, ೬, ೭, ೧೩, ೧೪, ೧೭, ೩೧, ೩೩, ೩೪, ೪೧ ಈ ಹನ್ನೊಂದು ಪದ್ಯಗಳು ಕಂದಗಳಾಗಿವೆ. ೪, ೫, ೧೬, ೩೭, ೪೦ ಈ ಐದು 'ಶಾರ್ದೂಲ ವಿಕ್ರೀಡಿತ' ವೃತ್ತಗಳು: ೮, ೧೮, ೧೯, ೨೧, ೨೫, ೨೮, ೩೫—ಈ ಏಳು ಚಂಪಕಮಾಲೆ; ೯, ೧೧, ೧೨, ೨೨, ೨೬, ೨೯, ೩೦, ೩೨, ೩೬, ೩೯—ಈ ಹತ್ತು ಉತ್ಪಲಮಾಲೆ; ೧೦, ೧೫, ೨೦, ೨೩, ೨೪, ೨೭, ೩೮, ಈ ಏಳು ಮತ್ತೇಭವಿಕ್ರೀಡಿತ ವೃತ್ತಗಳು ಹಾಗೂ ೪೫. ೪೬ನೇ ಪದ್ಯಗಳು ಕ್ರಮವಾಗಿ ಶಾಲಿನಿ ಮತ್ತು ವಸಂತ ತಿಳಕ ವೃತ್ತಗಳು. ಜೊತೆಗೆ ೧೩ನೇ ಪದ್ಯವಾದ ಮೇಲೆ ೧೦ ಪಂಕ್ತಿಗಳ ಒಂದು ಗದ್ಯ ಹಾಗೂ ೩೯ನೇ ಪದ್ಯವಾದ ಮೇಲೆ ಒಂದು ಪುಟದ ಒಂದು ದೀರ್ಘಗದ್ಯ ಈ ಶಾಸನದಲ್ಲಿ ಬಂದಿವೆ.

ಬಹಳ ಚೆನ್ನಾಗಿ ಅಂದವಾಗಿ ಕೆತ್ತಿರುವ ಈ ಶಾಸದಲ್ಲಿನ ಸಂವದತ್ತಿಯ ರಟ್ಟ ವಂಶಾನ್ವಯದ ವರ್ಣನೆ ಇದೆ. ಸಾಮಂತರಾಗಿ, ಮಹಾಸಾಮಂತರಾಗಿ. ಮಹಾಮಂಡಳೇಶ್ವರರಾಗಿ ಬೆಳೆದು ಬಂದ ಈ ಅರಸುಮನೆತನ ಈ ಶಾಸನವನ್ನು ರಚಿಸುವ ಕಾಲಕ್ಕೆ ಸ್ವತಂತ್ರವಾಗಿ ಆಳುತ್ತಿತ್ತು. ನಾಮಾವಶೇಷವಾಗಿದ್ದ ಚಾಳುಕ್ಯ ಸಾಮ್ರಾಜ್ಯದಲ್ಲಿ ಅಧಿಪತ್ಯಕ್ಕಾಗಿ ದೇವಗಿರಿಯ ಯಾದವರು ಹಾಗೂ ದೇವಸಮುದ್ರದ ಹೊಯ್ಸಳರೂ ಪ್ರಯತ್ನಿಸುತ್ತಿದ್ದ ಕಾಲದಲ್ಲಿ ಅನೇಕ ಮಹಾಮಂಡಳೇಶ್ವರರು ಸ್ವತಂತ್ರವಾಗಲು ಹವಣಿಸು

ತ್ತಿದ್ದರು. ಅಂಥವುಗಳಲ್ಲಿ ಸವದತ್ತಿಯ ರಟ್ಟರ ಮನೆತನವೂ ಒಂದು. ಅದು ಕಾರ್ತವೀರ್ಯನ ಕಾಲದಲ್ಲಿ ಸ್ವತಂತ್ರವಾಗಿ ಬಾಳಲು ಆರಂಭಿಸಿತು. ಆದುದರಿಂದ ಶಾಸನದಲ್ಲಿ ಕಾರ್ತವೀರ್ಯನಿಗೆ 'ಸಾಮ್ರಾಜ್ಯಲಕ್ಷ್ಮಿಯನ್ನನುಭವಿಸುತ್ತಮಿರೆ' (ಸಾ ೧೮-೧೯) ಎಂದು ವರ್ಣಿಸಲಾಗಿದೆ. ...

ಈ ಶಾಸನದಲ್ಲಿ ಕಾರ್ತವೀರ್ಯನ ವಂಶಕ್ಕೆ ಸಂಬಂಧಿಸಿದಂತೆ ನಾಲ್ಕು ತಲೆಮಾರಿನ ವರ್ಣನೆ ಇದೆ. ಇಮ್ಮಡಿಸೇನ. ರಾಣಿ ಲಕ್ಷ್ಮೀದೇವಿ. ಇವರ ಪುತ್ರ ಕತ್ತಮ ಅಥವಾ ಮುಮ್ಮುಡಿ ಕಾರ್ತವೀರ್ಯ. ಈತನ ಸತಿ ಪದ್ಮಲದೇವಿ. ಇವರ ಮಗ ಲಕ್ಷ್ಮೀದೇವ. ಈತನ ಹೆಂಡತಿ ಚಂದ್ರಿಕಾದೇವಿ. ಇವರ ಮಕ್ಕಳು —ಕಾರ್ತವೀರ್ಯ ಮತ್ತು ಮಲ್ಲಿಕಾರ್ಜುನ. ಈ ಕಾರ್ತವೀರ್ಯನೇ ನಾಲ್ಕನೇ ಕಾರ್ತವೀರ್ಯನೆಂದು ಪ್ರಸಿದ್ಧನಾಗಿ ಈ ಶಾಸನದ ಕಾಲದಲ್ಲಿ ರಾಜ್ಯಭಾರ ಮಾಡುತ್ತಿದ್ದ. ಈತನ ಮಹಾದೇವಿ ಏಚಲದೇವಿ. ಈಕೆಯನ್ನು 'ಚಕ್ರವರ್ತಿತನುಜೆ' ಎಂದು ಶಾಸನದಲ್ಲಿ ಕರೆಯಲಾಗಿದೆ. ಆದರೆ ಯಾವ ಚಕ್ರವರ್ತಿಯ ಮಗಳು ಎಂಬುದು ತಿಳಿದು ಬಂದಿಲ್ಲ.

ಕಾರ್ತವೀರ್ಯ-ಮಲ್ಲಿಕಾರ್ಜುನರ ತಾಯಿ ಚಂದ್ರಿಕಾ ದೇವಿಯ ವಂಶವರ್ಣನೆಯೂ ಈ ಶಾಸನದಲ್ಲಿ ಬಂದಿದೆ. ಅದರ ಪ್ರಕಾರ—ಯದುವಂಶದಲ್ಲಿ ರೆಬ್ಬನೆಂಬ ಪ್ರಭು. ಹೆಂಡತಿ ಹೊಲ್ಲಾದೇವಿ. ಇವರ ಪುತ್ರ ಬ್ರಹ್ಮ. ಈತನ ಸತಿ ಚಂದಲದೇವಿ. ಇವರ ಮಗ ರಾಜ. ಈ ರಾಜನ ರಾಣಿ ಮೈಳಲ ದೇವಿ. ಚಂದ್ರಿಕಾದೇವಿ ಮತ್ತು ಸಿಂಹನೃಪಾಳ ಅವರ ಮಕ್ಕಳು. ಸಿಂಹನ ಹೆಂಡತಿ ಭಾಗಲದೇವಿ. ಇವರ ಪುತ್ರ ರಾಜ. ಈ ರಾಜನಿಗೆ ಚಂದಲದೇವಿ ಮತ್ತು ಲಕ್ಷ್ಮಾದೇವಿ ಎಂಬ ಇಬ್ಬರು ರಾಣಿಯರು. ಈ

ರಾಜರಸ ಹಗರಟೆಗೆ ನಾಡಿನ ಅಧಿಪತಿ. ಇವರ ಮನೆತನ ಜೈನ ಧರ್ಮಕ್ಕೆ ಸೇರಿದ್ದು. ಈ ರಾಜರಸನು ಕಲ್ಹೊಳೆಯಲ್ಲಿ ತ್ರಿಕೂಟ ಮಂಡಿತ ಪಾರ್ಶ್ವಜಿನಾಲಯವನ್ನು ಕಟ್ಟಿಸಿ ಅದಕ್ಕೆ ಬಂಗಾರದ ಕಳಸ, ಮಕರ ತೋರಣ ಮಾನಸ್ತಂಭಾದಿಗಳನ್ನು ಮಾಡಿಸಿದ (ಸಾ. ೧೯–೪೩).

ಮುಂದೆ ಈ ಶಾಸನದಲ್ಲಿ ಈ ರಾಜರಸನ ಗುರುಕುಳವನ್ನು ವರ್ಣಿಸಿದೆ. ಕುಂದಕುಂದಾನ್ವಯದ ವಿಶ್ರುತ ಮೂಲ ಸಂಘದೊಳಗೆ ದೇಸಿಯುವೆಂಬ ಗಣ. ಆ ಗಣದಲ್ಲಿ ಪುಸ್ತಕವೆಂಬ ಗಚ್ಛ. ಈ ಗಚ್ಛದಲ್ಲಿ ಹನಸೋಗೆಯೆಂಬ ಬಳಿ. ಈ ಬಳಿಯಲ್ಲಿ ಮಲಧಾರಿಯೆಂಬ ಮುನೀಂದ್ರ. ಈತನ ಅಗ್ರಶಿಷ್ಯ ಸೈದ್ಧಾಂತಿಕ ನೇಮಿಚಂದ್ರ. ಇವನ ಶಿಷ್ಯ ಶುಭಚಂದ್ರ ಭಟ್ಟಾರಕ. ಈತನು ಮಂಡಳಾಚಾರ್ಯನಾಗಿದ್ದನು.

ಮಂಡಳಾಚಾರ್ಯರಾಗಿದ್ದ ಈ ಶುಭಚಂದ್ರಭಟ್ಟಾರಕರಿಗೆ ಕಾರ್ತವೀರ್ಯ ದೇವರಸನು ಕಲ್ಹೊಳೆಯಲ್ಲಿ ರಾಜರಸ ಮಾಡಿಸಿದ ಪಾರ್ಶ್ವನಾಥ ಜಿನಾಲಯಕ್ಕೆ ೨೦೦೦ ಕಂಬ ಭೂಮಿಯನ್ನು ಉಕ್ತವಾದ ತಿಥಿಯಲ್ಲಿ ದಾನಮಾಡಿಕೊಟ್ಟನು; ಹಾಗೂ ಮನೆಯ ನಿವೇಶನ, ಗಾಣ, ಅಂಗಡಿಗಳು, ಬಣಂಜೆಯ ನಿವೇಶನ ಮತ್ತು ಮೂವತ್ತು ಕಂಬ ಹೂದೋಟ ದಾನ ಮಾಡಿದನು. ಅದೇ ಪ್ರಕಾರ ಬೆಳಗಲಿ ಮುಖ್ಯವಾಗಿ ನಾಲ್ಕುಂ ಪಟ್ಟಣದ ಸೆಟ್ಟಿಯರು ಹಾಗೂ ಸಮಸ್ತ ಮುಮ್ಮುಡಿ ದಂಡಂಗಳು ಕೆಲವು ದಾನಗಳನ್ನು ಬಿಟ್ಟರು.

"...ಶ್ರೀರಾಜನೃಪಾಳ ಸಂಪ್ರತಿಷ್ಠಿತ ಶಾಂತಿನಾಥ ದೇವರ ಬಸದಿಯಾಚಾರ್ಯರುಂ ಮಂಡಳಾಚಾರ್ಯರುಮಪ್ಪ ಶುಭಚಂದ್ರ ಭಟ್ಟರಕ ದೇವರ್ಗ್ಗೆ ಶ್ರೀಕಾರ್ತವೀರ್ಯ ದೇವಂ ಆ ಶಾಂತಿ

ನಾಥ ದೇವರಂಗಭೋಗಕ್ಕಂ ರಂಗಭೋಗಕ್ಕಮಾ ಬಸದಿಯ ಖಂಡ ಸ್ಫುಟಿತ ಜೀರ್ಣೋದ್ಧರಣಕ್ಕಮಲ್ಲಿರ್ಪ್ಪ ಮುನಿಜನಂಗಳಾ ಹಾರಾಭಯ ಭೈಷಜ್ಯಶಾಸ್ತ್ರದಾನಕ್ಕಂ ಶಕವರ್ಷಂ ೧೧೨೬ನೆಯ ರಕ್ತಾಕ್ಷಿ ಸಂವತ್ಸರದ ಪುಶ್ಯ ಶುದ್ಧ ಬಿದಿಗೆ ಶನಿವಾರದಂದುತ್ತರಾಯಣ ಸಂಕ್ರಮಣದಲ್ಲಿ..." ಎಂದು ಈ ಶಾಸನದ ಎರಡನೆಯ ಗದ್ಯ ಭಾಗದಲ್ಲಿ ಇದರ ಕಾಲವನ್ನು ಹೇಳಲಾಗಿದೆ. ಈ ಶಕವರ್ಷ ೧೧೨೬ಕ್ಕೆ ರಕ್ತಾಕ್ಷಿ ಸಂವತ್ಸರ ಗತವಾಗಿರದೆ ವರ್ತಮಾನವಾಗಿದೆ. ಈ ವರ್ಷಕ್ಕೆ ಕ್ರಿ. ಶ. ೧೨೦೪ ಸಮಾನವಾಗುತ್ತದೆ. ಪ್ರಸ್ತುತ ವರ್ಷದಲ್ಲಿ ಪುಷ್ಯ ಬಿದಿಗೆ ಶನಿವಾರ ದಿವಸ ಸರಿಯಾಗಿ ಬರುತ್ತದೆ. ಹೀಗೆ ತಿಥಿಯ ಉಲ್ಲೇಖ ಸರಿಯಾಗಿದ್ದು ಅದಕ್ಕೆ ಸಮಾನವಾಗಿ ಇಂಗ್ರೇಜಿ ತಾರೀಖು ೨೫ ಶನಿವಾರ ಡಿಸೆಂಬರ ೧೨೦೪ ಆಗುತ್ತದೆ.

ಇದರಲ್ಲಿ ಬಂದಿರುವ ಸ್ಥಳಗಳು (೧) ಕೊಂಡಿ ಮಂಡಳ ಹಾಗೂ ಕೊಂಡಿ ಮೂಱುಸಾಸಿರ ಎರಡೂ ಒಂದೇ. ಇದು ಸಾಂಪ್ರದಾಯಿಕವಾಗಿ ಮೂರು ಸಾವಿರ ಹಳ್ಳಿಗಳ ಒಂದು ರಾಜಕೀಯ ಭಾಗ. ಉತ್ತರಕ್ಕೆ ಕೃಷ್ಣಾನದಿ ಮತ್ತು ದಕ್ಷಿಣಕ್ಕೆ ಮಲಪ್ರಭಾ ನದಿ ಹಾಗೂ ಸವದತ್ತಿಯನ್ನು ಒಳಮಾಡಿಕೊಂಡ ಈಗಿನ ಬೆಳಗಾವಿಜಿಲ್ಲೆ. ಅಳಿದು ಹೋಗಿರುವ ಕೊಂಡಿಪಟ್ಟಣ ಇದರ ಮುಖ್ಯ ಸ್ಥಳ. (೨) ವೇಣುಗ್ರಾಮ ಈಗಿನ ಬೆಳಗಾವಿ ನಗರ. (೩) ಹಗರಟಗೆ ನಾಡು: ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಸಿಂದಗಿ ತಾಲ್ಲೂಕುಗಳ ಪೂರ್ವಭಾಗ ಮತ್ತು ಗುಲ್ಬರ್ಗಾ ಜಿಲ್ಲೆಯ ಸೋಲಾಪುರ ತಾಲ್ಲೂಕಿನ ಬಹುಭಾಗ ಕೂಡಿದ ನಾಡು. ಈ ತಾಲೂಕಿನ ಹಗರಟಗಿ ಈ ನಾಡಿನ ಪ್ರಮುಖ ಗ್ರಾಮ (೪) ಕುಪಣಪುರ—ಈಗಿನ ರಾಯಚೂರು ಜಿಲ್ಲೆಯ ಕೊಪ್ಪಳ.

(೫) ಕಲ್ಹೊಳೆ—ಮೇಲೆ ಹೇಳಿರುವುದೇ-ಇದಕ್ಕೆ ಸಿಂದನ ಕಲ್ಹೊಳೆ ಯೆಂದೂ ಹೆಸರಿತ್ತು. (೬) ಹನಸೋಗೆ: ಅಸ್ಪಷ್ಟ. 'ಹನ ಸೋಗೆಯ ಬಳಿ' ಎಂಬುದು ಜೈನ ಮುನಿಗಣಗಳಲ್ಲಿ ಒಂದು ಉಪಶಾಖೆ. (೭) ಕುಱುಂಬೆಟ್ಟ—ಗೋಕಾಕ ತಾಲ್ಲೂಕಿನಲ್ಲಿಯ ಈಗಿನ ಸಿಂದೀಕುರಬೇಟ. ಕಲ್ಹೊಳೆಗ್ರಾಮ ಈ ಕುಱುಂಬೆಟ್ಟ ಗಂಪಣಕ್ಕೆ ಸೇರಿತ್ತು. ಕಂಪಣ ಎಂದರೆ ಹಳ್ಳಿಗಳ ಸಮೂಹ. (೮) ಕಂಕಣ ನೂರ—ರಾಯಭಾಗ ತಾಲೂಕಿನಲ್ಲಿರುವ ಈಗಿನ ಕಂಕಣವಾಡಿ. (೯) ಬೆಳಗಲೆ—ಇದು ಮುಧೋಳ ತಾಲ್ಲೂಕಿನಲ್ಲಿ ಮುಧೋಳ - ಮಹಾಲಿಂಗಪುರ ರಸ್ತೆಯಲ್ಲಿ ಮುಧೋಳಕ್ಕೆ ಸುಮಾರು ಹತ್ತು ಮೈಲಿ ದೂರದಲ್ಲಿದೆ. (೧೦) ಏಳುವರೆ—ರಾಷ್ಟ್ರಕೂಟ ಚಾಳುಕ್ಯರ ರಾಜ್ಯವಾಗಿದ್ದ ಸಪ್ತಾರ್ಧಲಕ್ಷ ಪ್ರದೇಶ ವಾಗಿರಬಹುದು. (೧೧) ಹನ್ನೊಂದುವರೆ—ಅಸ್ಪಷ್ಟ.

ಈ ಶಾಸನದಲ್ಲಿ ಬಂದಿರುವ ವರ್ಣನೆಗಳು ಕವಿಗೆ ಭಾಷೆ-ಶೈಲಿಯ ಮೇಲಣ ಪ್ರಭುತ್ವ ಹಾಗೂ ಪಾಂಡಿತ್ಯವನ್ನು ಸೂಚಿಸುತ್ತವೆ. ಉದಾಹರಣೆಗಾಗಿ ಒಂದೆರಡನ್ನು ಗಮನಿಸೋಣ: ಕಾರ್ತವೀರ್ಯನ ಪನ್ನತಿಯನ್ನು ಹಾಗೂ ಅವನ ತಮ್ಮ ಮಲ್ಲಿಕಾರ್ಜುನನ ಉನ್ನತಿ ಯನ್ನು ಈ ರೀತಿ ವರ್ಣಿಸುತ್ತಾನೆ.

ಪರಚಕ್ರಂ ನಿಜವಿಕ್ರಮಕ್ಕಗಿದು ತೇಜಃಚಕ್ರಮಂ ಬಿಟ್ಟು ಕೋ
ವರಚಕ್ರಕ್ಕೆಣೆಯಪ್ಪಿನಂತಿರಿವಿನಂ ದ್ವಿಚಕ್ರಮಂ ಬ್ಯಾಪಿಸು
ತ್ತಿರೆ ಕೀರ್ತ್ಯಂಗನೆ ಕಾರ್ತವೀರ್ಯನಖಿಳೋರ್ವ್ವೀಚಕ್ರಮಂ ಚಕ್ರಿಯಂ
ತಿರೆ ದೋರ್ದ್ದಂಡದೊಳಾಂತನಚ್ಯುತಗುಣಂ ಶ್ರೀಹಟ್ಟನಾರಾಯಣ॥೧೦॥

ಮೇರುನಭಸ್ಥಳಂ ಜಳಧಿಮತ್ಪತಿಯುಂನತಿ ಸನ್ಮಹತ್ವ ಗಂ
ಭೀರಗುಣಕ್ಕೆ ಮಚ್ಚರಿಪುವೆಂದಮರಾದ್ರಿಯನಿಕ್ಕಿ ಮೆಟ್ಟಯಾ
ನೀರದ ಮಾರ್ಗ್ಗಮಂ ಪುದಿದು ವಾರಿಧಿಯಂ ಮಿಗೆ ದಾಂಟಿ ಕೀರ್ತ್ತಿಯಾ
ಶಾರಮಣರ್ಗ್ಗೆ ಬಂಣಿಪುದು ಪೆಂಪಿನಲಂಪಿಗೆ ಕಾರ್ತವೀರ್ಯನ ೧೧

ಊರ್ಜ್ಜಿತತೇಜನಾರ್ಜಿತಯಶಂ ಪರಿತರ್ಜ್ಜಿತರಾಷ್ಟ್ರಕಂಟಕಂ
ನಿರ್ಜ್ಜಿತದುರ್ಜಯಾರಿನಿವಹಂ ಕಮಳಾಧಿಪನಂತೆ ದಾನಿ ನಾ
ಗಾರ್ಜ್ಜುನನಂತೆ ರಾವಣವಿದಾರಣಕಾರಣ ರಾಮನಂತೆ ಮಿ
ಕ್ಕಾರ್ಜುನನಂತೆ ರಂಜಿಪನಿಳೇಶಚೂಡಾಮಣಿ ಮಲ್ಲಿಕಾರ್ಜುನಂ ೧೨

ಜನಪತಿ ಸಿಂಗನದೇವನ ಮನಃಪ್ರಿಯೆ ಭಾಗಲದೇವಿಯನ್ನು ಕುರಿತು.

ಜನಪತಿ ಸಿಂಗದೇವನ ಮನಃಪ್ರಿಯೆ ಭಾಗಲದೇವಿ ಭಾಗ್ಯದೇ
ವಿನಿ ಗುಣಯೂಥನಾಥ ಮುನಿದಾನವಿನೋದಿನಿ ಸಂಪ್ರಿತಾರ್ತ್ಥಿಭೇ
ದಿನಿ ವಿಬುಧ ಪ್ರಮೋದಿನಿ ಕಳಾಗಮ ವೇದಿನಿ ನಿತ್ಯಸತ್ಯವಾ
ದಿನಿ ದುರಿತಾಪ ಮೋದಿನಿ ಪತಿವ್ರತೆ ಪ್ರಾಜಿತರೂಪೆ ರಂಜಿಪಳ್ ೨೫

ಮಲಧಾರಿ ಮುನೀಂದ್ರ. ಅವರ ಶಿಷ್ಯ ಸೈದ್ಧಾಂತಿಕ ನೇಮಿಚಂದ್ರ ಅವರ ಶಿಷ್ಯ ಮಂಡಳಾಚಾರ್ಯರೆನಿಸಿದ ಶುಭ ಚಂದ್ರಭಟ್ಟಾರಕರನ್ನು ಕುರಿತು—

ಪದನಖಸಂಕುಳಂ ವಿಷಮಬಾಣ ವಿಷಾದ ಮಹಾವಿಷಾಪಹಾ
ರದ ಮಣಿ ನಾಮದಕ್ಕರಮೆ ಮೋದಪಟುಗ್ರಪಭೇದಿಮಂತ್ರಮಂ
ಗದ ಮಳಮಾ ಜವಂಜವ ರುಜಾ ಪರಿಶೋಷಧಮಂದೊಡೇನನೆಂ
ಬುದೊ ಪ್ಪ್ರಧಾರಿದೇವ ಮುನಿಪ್ರೋತ್ತಮಭಾವತಪಃಪ್ರಭಾವಮಂ ೬೫

ಶಾಂತರಸಾವತಾರ ಮಲಧಾರಿಮುನೀಶ್ವರರಗ್ರಶಿಷ್ಯ ಸೈ
ದ್ಧಾಂತಿಕ ನೇಮಿಚಂದ್ರನುರುಧರ್ಮ್ಮರತಂ ಶ್ರುತಪಾರ್ದ್ಧಿ ನೇಮಿಚಂ
ದ್ರಂ ತಮಮಂ ನಿವಾರಿಪ ಕಳಾಗುಣಭದ್ರನಮಾನುಷಾಮೃತ
ಸ್ವಾಂತ ಸಮಂತಭದ್ರನೆನೆ ಬಣ್ಣಿಸರಾರಕಳಂಕವೃತ್ತನಂ ೩೬

ಆ ಸೈದ್ಧಾಂತಿಕ ನೇಮಿಚಂದ್ರಯತಿಪರ್ಯ್ಯಾಚಾರ್ಯ್ಯಶಿಷ್ಯಗ್ರ್ಗಣಾ
ವಾಸಶ್ರೀ ಶುಭಚಂದ್ರಭಾಸುರಯಶೋ ಭಟ್ಟಾರಕರ್ವ್ವಿಶ್ವಧಾ
ತ್ರೀಸಂಪೂಜಿತ ಶೀಳಧಾರಕರುದಗ್ರಾನಂಗ ಸಂಹಾರಕ
ಶ್ರೀ ಸದ್ದರ್ಶನಬೋಧವೃತ್ತ ಪದವೀ ವಿಸ್ತಾರ ನಿಸ್ತಾರಕರ್ ೩೭

ಶುಭಚಂದ್ರಂ ಸ್ವಗುಣೋಲ್ಲಸತ್ಕುವಳಯ ಶ್ರೀ ಚಂದ್ರಿಕಾ ವೃದ್ಧ ಪ್ರ
ತ್ತಿಭವ ಪ್ರಾಭವದಿಂ ದಿಗಂಬರಕುಳಶ್ರೀ ವೃದ್ಧಿಯಂ ಮಂಡಳ
ಪ್ರಭು ಸಂಪೂಜಿತ ಪಾದನುಜ್ವಳ ಗುಣಾಢ್ಯಂ ಶಾಸ್ತ್ರರೂಪಂ ಕಳಾ
ವಿಭವಾತ್ಯಂತವೃತ್ತಸಭ್ಯುದಯ ಯುಕ್ತ ಮಾಳ್ಪುದೇನೊಪ್ಪದೇ ೩೮

ಇಲ್ಲಿನ ಒಂದು ವರ್ಣನ ಗದ್ಯ—

"ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಮಂಡಳೇಶ್ವರಂ ಲತ್ತನೂಪುರ್ರವರಾಧೀಶ್ವರಂ ತ್ರಿವಳೀತೂರ್ಯ್ಯನಿರ್ಘೋಷಣಂ ರಟ್ಟಕುಲಭೂಷಣಂ ಸಿಂದೂರ ಲಾಂಛನಂ ಸಫಳೀಕೃತ ವಿದ್ವಜ್ಜನಾಭಿಲಾಂಛನಂ ವೀರಕಥಾಕರ್ಣನ ಜಾತ ರೋಮಾಂಚಂ ಸಾಹಿತ್ಯ ವಿದ್ಯಾ ವಿರಿಂಚಂ ಸುವರ್ಣ್ಣ ಗರುಡಧ್ವಜಂ ಸಹಜಮಕರಧ್ವಜಂ ಸಂಗ್ರಾಮಕೌತೂ ಹಳೀಕೃತ ಗದಾದಂಡಂ ಕದನ ಪ್ರಚಂಡಂ ಸಿಂಧುರಾರಾತಿ ಬಂಧುರಕಬಂಧನರ್ತ್ತನಸೂತ್ರಧಾತಂ ವೈರಿಮಂಡಳಿಕ ಗಂಡ ತಳಪ್ರಹಾರಂ ಪರವಧೂಸಂದನಂ ವಿಭವಸಂಕ್ರಂದನಂ ಸಾಹಸೋತ್ತುಂಗಂ ಸಮಾರಾಧಿತ ಮಹಾಲಿಂಗ ನಿಮು ಮೊದಲಾದನೇಕ ನಾಮಾವಳೀ ವಿರಾಜಿತಂ ಶ್ರೀಕಾರ್ತ್ತವೀರ್ಯ್ಯದೇವಂ ನಿಜಾನುಜ ಯುವರಾಜ ವೀರ ಮಲ್ಲಿಕಾರ್ಜುನದೇವಂ ಬೆರಸಾ ವೇಣುಗ್ರಾಮಸ್ಕಂಧಾವಾರದೊಳು ಸುಖದಿಂ ಸಾಮ್ರಾಜ್ಯ ಲಕ್ಷ್ಮಿಯನನುಭವಿಸುತ್ತಮಿರೆ."

ಕವಿ ಪಾರ್ಶ್ವಪಂಡಿತನು ಲಲಿತಪದ, ಅರ್ಥ, ಅಲಂಕಾರಗಳಿಂದ, ಒಸರ್ವ ರಸಗಳಿಂದ, ವಿದ್ವಾಂಸರಲ್ಲಿ ರೋಮಾಂಚವುಂಟಾಗುವಂತೆ ಕವಿಕುಳತಿಲಕನಾದ 'ತಾನು ಈ ಶಾಸನವನ್ನು ಬರೆದಂತೆ ಕೆಳಗಿನ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:

ಲಳಿತಪದಾರ್ತ್ಥಾಳಂಕೃತಿ
ಗಳಿನೊಸರ್ವ ರಸಂಗಳಿಂದೆ ಬುಧರೊಳ್ಪುಳಕಾ
ವಳಿ ಸಸ್ಯಮೊಗೆಯೆ ಕವಿಕುಳ
ತಿಳಕಂ ಶಾಸನ ಮನೊಲ್ದು ಪೇಳ್ದಂ ಪಾರ್ಶ್ವಂ ೪೧

ತನ್ನ 'ಕವಿಕುಳ ತಿಳಕ' ಎಂಬ ಈ ಬಿರುದನ್ನು ತಾನು ಬರೆದಿರುವ 'ಪಾರ್ಶ್ವನಾಥಪುರಾಣ'ದ ಪ್ರತಿ ಆಶ್ವಾಸದ ಕೊನೆಯಲ್ಲಿ ಬರುವ ಗದ್ಯದಲ್ಲಿ ಈ ರೀತಿ ಹೇಳಿಕೊಂಡಿದ್ದಾನೆ.

"ವಿದಿತ ವಿಬುಧ ಲೋಕನಾಯಕಾಭಿಪೂಜ್ಯ ವಾಸುಪೂಜ್ಯ ಜಿನ ಮುನಿ ಪ್ರಸಾದಾಸಾದಿತ ನಿರ್ಮಳ ಧರ್ಮವಿನುತ ವಿನೇಯ ಜನವನ ಜವನ ವಿಳಸಿತ ಕವಿಕುಳ ತಿಳಕ ಪ್ರಣೂತ ಪಾರ್ಶ್ವನಾಥ ಪ್ರಣೀತಮಪ್ಪ ಪಾರ್ಶ್ವನಾಥಪುರಾಣದೊಳ್..."

## ಕಥಾವಸ್ತು

ಪಾರ್ಶ್ವಪಂಡಿತನು ತನ್ನ ಕಾವ್ಯಾರಂಭದಲ್ಲಿ ಶ್ರೀವಾಕ್ಸಿದ್ಧಿಗೆ ನಿರ್ಮಳ ನಿಖಿಳ ಕಲಾವೃದ್ಧಿಗೆ. ಶುದ್ಧಚಾರಿತ್ರಾವಷ್ಟಂಭಕ್ಕೆ, ದರ್ಪಿತ ಲಸನ್ಮೂರ್ತಿಗೆ ಮೆಚ್ಚಿ ಮುಕ್ತ್ಯಂಗನೆಯನ್ನು ವರಿಸಿ ನಿತ್ಯಾನಂದದಲ್ಲಿದ್ದು ದೇವೇಂದ್ರಾಹೀಂದ್ರ ವಂದ್ಯನಾದ ಪಾರ್ಶ್ವ ನಾಥ ತೀರ್ಥಂಕರನನ್ನು ಸ್ತುತಿಸಿ, ಸಿದ್ಧಪರಮೇಷ್ಠಿಗಳು, ಆಚಾರ್ಯ ಪರಮೇಷ್ಠಿಗಳು, ಉಪಾಧ್ಯಾಯ ಪರಮೇಷ್ಠಿಗಳು, ಸಾಧು ಪರಮೇಷ್ಠಿಗಳು ಹೀಗೆ ಪಂಚಪರಮೇಷ್ಠಿಗಳನ್ನು ವಂದಿಸು ತ್ತಾನೆ. ನಂತರ ಶೃತಕೇವಲಿಗಳಿಗೆ ವಂದಿಸಿ, ರತ್ನತ್ರಯಗಳನ್ನು ನೆನೆದು, ಪಾರ್ಶ್ವತೀರ್ಥಂಕರರ ಯಕ್ಷ-ಯಕ್ಷಿಯರಾದ ನಾಗರಾಜ-ಪದ್ಮಾವತಿಯರನ್ನು ನೆನೆದು, ಜನವಾಣಿಯೆನಿಪ್ಪ ಭಾರತೀದೇವಿ ತನ್ನ ಮುಖಾರವಿಂದದಲ್ಲಿ ನೆಲಸಲೆಂದು ಪ್ರಾರ್ಥಿಸುತ್ತಾನೆ. ಮುನಿ ರಾಜಹಂಸರೆಂದು ಪ್ರಸಿದ್ಧರಾದ ಜಟಾಚಾರ್ಯಮುನಿ, ಕುಂದ ಕುಂದಾಚಾರ್ಯರು, ಸಮಂತಭದ್ರರುಗಳನ್ನು ನೆನೆದು ಕವಿಶ್ರೇಷ್ಠ ರಾದ ಕವಿಪರಮೇಷ್ಠಿಗಳು, ಜೈನೇಂದ್ರವ್ಯಾಕರಣಕರ್ತೃಗಳಾದ ಪೂಜ್ಯಪಾದ ಮುನಿಗಳು, ಅಕಳಂಕದೇವರು, ಸಮಂತಭದ್ರರು,

ಗಣಿತಶಾಸ್ತ್ರ ಪ್ರವೀಣರಾದ ವೀರಾಚಾರ್ಯಮುನಿಗಳು, ವಾಕ್ಸಿದ್ಧಿ ಯುಳ್ಳ ವೀರಸೇನಮುನಿಗಳು, ಜಿನಸೇನಾಚಾರ್ಯರು, ಗುಣಭದ್ರ ಮುನಿಗಳು, ಸ್ಯಾದ್ವಾದೀಶ್ವರ ಸೋಮದೇವಮುನಿಗಳು, ತರ್ಕ ತ್ರಯ ಗ್ರಂಥಕರ್ತೃ ವಾದಿರಾಜದೇವರು, ಗಣಿತ ಭಾಸ್ಕರನೆನಿಸಿದ ಮುನಿಚಂದ್ರರು, ಕಟಕೋಪಾಧ್ಯಾಯರೆನಿಸಿದ ಶ್ರುತಕೀರ್ತಿ ಮುನಿ ಗಳು, ನೇಮಿಚಂದ್ರಭಟ್ಟಾರಕರು, ವಾಸುಪೂಜ್ಯಮುನಿಗಳು, ಮುನಿ ಚಂದ್ರ ಸಿದ್ಧಾಂತ ಚಕ್ರವರ್ತಿಗಳ ಮಗ ಸೈದ್ಧಾಂತಿಕ ಚಕ್ರವರ್ತಿ ಯೆನಿಸಿಕೊಂಡ ವೀರನಂದಿ ಮುನಿ, ನೇಮಿಚಂದ್ರ ಸಿದ್ಧಾಂತ ಮುನಿಗಳು, ತಪಸ್ಸಮುದ್ರರೂ, ದಯಾಸಮುದ್ರರೂ ಆದ ಉದಯಚಂದ್ರ ಮುನಿಗಳು, ನೇಮಿಚಂದ್ರ ಮುನಿಗಳು, ವಾಸು ಪೂಜ್ಯ ಭಟ್ಟಾರಕರು, ಸಮ್ಯಕ್ಚಾರಿತ್ರ ಶ್ರೇಷ್ಠರಾದ ರಾಮಚಂದ್ರ ಮುನಿಗಳು, ಶಾಂತಿಯುಳ್ಳವರಾದ ನಂದಿಯೋಗೀಶ್ವರರು, ಅಭಿನವ ಗಣಧರರೆನಿಸಿದ ಶುಭಚಂದ್ರತ್ರೈವಿದ್ಯಮುನಿಗಳು, ಜಗತ್ಪೂಜಿತ ಕುಮುದಚಂದ್ರಮುನಿಗಳು, ಕಮಲಸೇನ ಭಟ್ಟಾರ ಕರು, ಮಾಘನಂದಿ ತ್ರೈವಿದ್ಯ ಮುನಿಗಳು, ಲಲಿತಕೀರ್ತಿ ಮುನಿ ಗಳು. ಶ್ರೀ ನಂದಿಮುನಿಯ ಮುಖ್ಯಶಿಷ್ಯನೂ, ದೇವನಂದಿ ಮುನಿಯಿಂದ ವ್ಯಾಕರಣವನ್ನು ಕಲಿತವನೂ, ಪೂಜ್ಯಪಾದ ಮುನಿಯಂತಿರುವವನೂ ಆದ ವಿದ್ಯಾನಂದ ತ್ರೈವಿದ್ಯ ಮುನಿಗಳು, ಶುದ್ಧ ತಾರ್ಕಿಕ ಭಾವಸೇನ ತ್ರೈವಿದ್ಯ ಮುನಿಗಳು, ಕುಮುದ ಚಂದ್ರ ಮುನಿ ಪುತ್ರ ಸತ್ಪುರುಷ ವಂದ್ಯ ವೀರನಂದಿ ಮುನಿಗಳು ಮುಂತಾದ ಮುನಿಶ್ರೇಷ್ಠರೂ ಧನಂಜಯನೆನಿಸಿ ಧನಂಜಯ ಮುಂತಾದ ಸಂಸ್ಕೃತ ಕವಿಶ್ರೇಷ್ಠರೂ ಆದ ಮಹಾನುಭಾವರನ್ನು ನೆನೆದ ಮೇಲೆ ಕನ್ನಡ ಕವಿಗಳನ್ನು ನೆನೆಯುತ್ತಾನೆ. ವರ್ಧಮಾನ ಪುರಾಣವನ್ನು ಬರೆದ ಪ್ರಸನ್ನ ಗುಣನಾದ ಆಚಣ್ಣ, ನೇಮಿನಾಥ

ಪುರಾಣವನ್ನು ಬರೆದ ಗುಣವರ್ಮ, ಪ್ರೌಸತೆಸೆಸಿರ್ದ ರೀತಿಯಿಂ ನಿರ್ವಹಿಪಗ್ಗದ ಬಲ್ಮೆ ತನಗಲ್ಲದೆ ಪೆಱಗಿಲ್ಲೆನಿಪ ಪೊನ್ನ, ಉದ್ಘಾಟಿತ ರಮಣೀಯವೆನಿಸಿದ ಕೃತಿ ನಿರ್ಮಾತೃ ಪಂಪ, ನೂತನವಾದ ಅರ್ಥವುಳ್ಳ ಕೃತಿಪದಕ ನಿರ್ಮಾತೃ ರನ್ನ, ರೂಪಸ್ತವನ ಮಣಿಪ್ರವಾಳಮಂ ಜಿನನಾಸ್ಥಾನ ಸ್ತವನಮನೊದವಿಸಿ ಭುವನಸ್ತುತನಾದ ಅಗ್ಗಳ. ಪಂಪನಿಂದೀಚೆಗೆ ಕಳಕಂಠನಧ್ವನಿಯಂತೆ ಇಂಪಾದ ಕವಿತೆಯನ್ನು ಹೇಳಿದ ಅಭಿನವ ಪಂಪ (ನಾಗಚಂದ್ರ). ಸುಜನೋತ್ತಂಸನೆನಿಸಿಕೊಂಡ ಬೊಪ್ಪಣ್ಣ. ಸುಕೃತ ಸಿಂಹನೆನಿಸಿದ ಕೇಶಿಯಣ್ಣ, ಸ್ತನಶತಕವನ್ನು ಬರೆದ ಕವಿ ಕಾಮ. ಕವಿಗಳೊಳಗೆ ನೆಗಟ್ದಿ ಅಗ್ಗಳ, ನೇಮಿಚಂದ್ರ. ವಕ್ರೋಕ್ತಿ ನಿಸ್ಸೀಮನೆನಿಸಿದ ಬಾಳ ಚಂದ್ರಕವಿ. ಕಾವ್ಯಕಳಾಚತುರ್ಮುಖನೆಂಗೆಸೆವ ವಾಸುದೇವ ಕವಿ. ಹೀಗೆ ನೂತನ ಪುರಾತನ ಕವಿಗಳನ್ನು ಹೊಗಳಿ ಹೊಸ ಕವಿಗಳು ಒಳ್ಳೆಯ ಗುಣಶಾಲಿಗಳಾಗಿರುವುದಾದರೆ ಗುಣಪ್ರಿಯರಾದ ನಮಗೆ ಅವರೂ ಪುರಾತನ ಕವಿಗಳಿಗೆ ಸಮಾನರೇ ಎನಿಸಿಕೊಳ್ಳು ವರು ಎಂದು ತನ್ನ ಸಮಯ ಪ್ರಜ್ಞೆ ಹಾಗೂ ಉತ್ತಮ ವಿಮರ್ಶಕ ಗುಣವನ್ನು ಮೆರೆದಿದ್ದಾನೆ.

"ಪಂಪನ ನುಣ್ಪುವೆತ್ತ ನುಡಿ. ಪೊನ್ನನ ಬಿನ್ನಣದೋಜೆ. ರನ್ನನೊಳ್ಪಂ ಪುದಿದಿರ್ದ ಲಕ್ಷಣ ವಿಚಕ್ಷಣೋನ್ನತಿ, ಕಣ್ಣಮಯ್ಯನಿಂಪಂ ಪುದಿದಿರ್ದ ಗೌರವ ಗುಣಂ, ಗುಣವರ್ಮನ 'ದೇಸೆವೆತ್ತ ಮಾತು"—ಈ ನನ್ನ ಕೃತಿಯಲ್ಲಿ ಇವೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ. ಅನಂತರ ಕಾವ್ಯ ಹೇಗಿರಬೇಕೆಂಬುದನ್ನು—

"ನುಡಿ ಪೊಸತಾಯ್ತು ದೇಸೆ ಪೊಸತಾಯ್ತು ನಯಂ ಪೊಸತಾಯ್ತು ರೀತಿ ನೋಟಿಪ್ಪೊಡೆ ಪೊಸತಾಯ್ತು ಕಾಕುಪೊಸತಾಯ್ತು ಛಲಂ ಪೊಸತಾಯ್ತು ಜಾಣೊಡಂ

ಬಡೆ ಪೊಸತಾಯ್ತು ಕೆಂಕು ಪೊಸತಾಯ್ತು ರಸಂ ಪೊಸತಾಯ್ತು ತನ್ನಿನೆಂದೊಡೆ ಕವಿ ಪೇಳ್ವುದಲ್ಲದೊಡೆ ಕಾವ್ಯಮೇಂ ಬುಧಸೇವ್ಯಮಕ್ಕುಮೇ"
ಈ ಮೇಲಿನ ಪದ್ಯದಲ್ಲಿ ಹೇಳುತ್ತಾ ವಿದ್ವಾಂಸರಿಗೆ ಒಪ್ಪುವಂತೆ ಕಾವ್ಯವೆಲ್ಲ ಪೊಸತೆನ್ನುವಂತೆ ಕಾವ್ಯರಚನೆ ಮಾಡಿದ್ದೇನೆ ಎಂದು ಹೇಳಿಕೊಳ್ಳುತ್ತಾ ಕವಿ ಹೇಗಿರಬೇಕು. ಕಾವ್ಯ ಹೇಗಿರಬೇಕು ಎಂಬುದನ್ನು ವಿವರವಾಗಿ ಹೇಳುತ್ತಾನೆ. ಅನಂತರ ತನ್ನವಂಶ ಚರಿತ್ರೆಯನ್ನು ಹೇಳಿಕೊಂಡು ವೃಷಭಜಿನೇಂದ್ರನ ಸಮವಸರಣದಲ್ಲಿ ವೃಷಭಸೇನ ಗಣಧರರಿಂದ ಭರತಚಕ್ರವರ್ತಿಗೆ ಹೇಳಲ್ಪಟ್ಟುದೂ, ಮಹಾವೀರ ವರ್ಧಮಾನ ಸ್ವಾಮಿಯವರ ಸಮವಸರಣದಲ್ಲಿ ಗೌತಮ ಗಣಧರರಿಂದ ಮಗಧ ಮಾಂಡಳಿಕ ಶ್ರೇಣಿಕನಿಗೆ ಹೇಳಲ್ಪಟ್ಟುದೂ ಆಗಿ ಬಳಿಕ ಶ್ರುತಕೇವಲಿಗಳ ಮೂಲಕ ಪರಂಪರೆಯಾಗಿ ಹೇಳಲ್ಪಡುತ್ತ ಬಂದ ಪಾರ್ಶ್ವಜಿನೇಶ್ವರರ ಕಥೆಯನ್ನು ವಿದ್ವಾಂಸರು ಮೆಚ್ಚಿ ಓದುವಂತೆ ಬರೆದಿದ್ದೇನೆ ಎಂದು ಹೇಳಿ ಕತೆಯನ್ನು ಪ್ರಾರಂಭಿಸುತ್ತಾನೆ.

ಜಗತ್ತಿನ ವರ್ಣನೆಯನ್ನು ಮಾಡಿ, ಸಮುದ್ರ, ಪರ್ವತ, ಪೌದನ ಪುರದ ವಿಸ್ತಾರವಾದ ವರ್ಣನೆಯನ್ನು ಮಾಡಿದ ಮೇಲೆ ಒಳ್ಪುವೆತ್ತ ಚೆಲ್ವಿಂದಂ, ರಕ್ಷಾಮಣಿ ಚಿಂತಾಮಣಿ ಚೂಡಾಮಣಿ ಎನಿಸಿದ ಪೌದನಪುರದ ರಾಜ ವಿಶದ ಗುಣೋತ್ಕರಕಳಿತಂ ರಾಜಹಂಸ ಸಂಕುಳ ಸೇವ್ಯಂ ಸಿರಿಯುಂ ಪ್ರತಾಪದಿಂದಂ ಧರಿಯಿಸಿದ ಚಿತ್ರ ಚರಿತ್ರನಾದ ಅರವಿಂದ. ಮಂತ್ರಿ ಅಸಮಪ್ರಜ್ಞಾನಿಧಿ, ರಣರಸಿಕಂ, ಪರಹಿತನ್ ಎನಿಸಿದ ವಿಶ್ವಭೂತಿ ನಿಜಮಂತ್ರದಿಂ ಅಧಿಪಂಗೆ ವಿಶ್ವಾವನಿಯುಂ ಸಾಧಿಸಿಕೊಟ್ಟಂ. ಈತನ ಪತ್ನಿ ಸಮಾನ ಧರ್ಮಿ ಎನಿಸಿದ ಅಸುಂದರಿ. ಇವರಿಗೆ ಇಬ್ಬರು ಮಕ್ಕಳು: ಹಿರಿಯ ಮಗ ಕಮಠ, ಅವನ ಪತ್ನಿ ವಾರುಣಿ; ಕಿರಿಯ ಮಗ

ಮರುಭೂತಿ, ಅವನ ಪತ್ನಿ ವಸುಂಧರೆ. ಕಠಿನಸ್, ಅಧೋಗಮನ ಮನಂ, ಜಡಸಂಹತಂ, ಮಹಾದುರ್ದಮಕರ್ದಮಲೋಲಂ. ಭವ ಸಮುದ್ರದೊಳ್ ಮಗ್ನನಪ್ಪುವಂ ಪಿರಿಯಪುತ್ರಂ ಕಮಠಂ. ದಾನ ದಲ್ಲಿ ಸುರಭೂಜವಿರಾಜಿತಂ, ವಿಶುದ್ಧ ಯಶೋವಲ್ಲರಿಯಿಂ ಪರಿ ಶೋಭಿಪಂ ಕಿರಿಯ ಮಗಂ ಮರುಭೂತಿ. ತನ್ನ ಪತ್ನಿ-ಪುತ್ರ ರೊಂದಿಗೆ ಅರಸನಿಗೆ ಮೆಚ್ಚುಗೆಯಾಗುವ ರೀತಿಯಲ್ಲಿ ವೈಭವ ದಿಂದಿದ್ದ ವಿಶ್ವಭೂತಿಗೆ ತಲೆಯಲ್ಲಿ ನರೆಗೂದಲು ಕಂಡಕೂಡಲೇ ಸಂಸಾರದ ಅನಿತ್ಯತೆಯನ್ನು ಅರಿತು, ಮನಸ್ಸಿನಲ್ಲಿ ವೈರಾಗ್ಯವನ್ನು ತಾಳಿ, ಪ್ರಾಜ್ಞನೂ ಎಲ್ಲರ ಪ್ರೀತಿಗೆ ಪಾತ್ರನೂ ಆಗಿರುವ ಮರುಭೂತಿ ಇರುವಾಗ, ಅಜ್ಞನೂ ಎಲ್ಲರ ತಿರಸ್ಕಾರಕ್ಕೆ ಪಾತ್ರನೂ ಆಗಿರುವ ಕಮಠನನ್ನು ನನ್ನ ಸ್ಥಾನದಲ್ಲಿ ಹೇಗೆತಾನೆ ನೇಮಿಸಲಿ ಎಂದು ಸಂಸಾರವನ್ನು ತೊರೆದಂತೆ ಕಮಠನನ್ನೂ ಉದಾಸೀನತೆ ಯಿಂದ ತಳ್ಳಿಹಾಕಿ ಮರುಭೂತಿಯನ್ನು ಸ್ವೀಕರಿಸಿ ಅರವಿಂದ ಮಹಾರಾಜನ ಬಳಿಗೆ ಬಂದು ತನ್ನ ಮನಸ್ಸಿನ ನಿರ್ಧಾರವನ್ನು ತಿಳಿಸಿ, ಇದುವರೆಗೂ ಸಂತೋಷದಿಂದ ನನಗೆ ಬುದ್ಧಿವಾದವನ್ನು ಹೇಳುತ್ತಾ, ನನ್ನಿಂದ ತಾವು ಸೇವೆಯನ್ನು ತೆಗೆದುಕೊಂಡಂತೆಯೇ ಮುಂದೆ ಈತನಿಗೂ ಬುದ್ಧಿಗಲಿಸಿ ಸೇವೆ ತೆಗೆದುಕೊಳ್ಳಬೇಕೆಂದು ಹೇಳಿ ಮಂತ್ರಿ ವಿಶ್ವಭೂತಿ ತನ್ನ ಕಿರಿಯ ಮಗ ಮರುಭೂತಿಯನ್ನು ರಾಜನಿಗೆ ಒಪ್ಪಿಸಿ, ಕೆಟ್ಟ ಕರ್ಮಗಳ ಬಂಧನದಿಂದ ಬಿಡಿಸಿಕೊಳ್ಳು ವಂತೆ ತನ್ನ ಸಮಸ್ತ ಪರಿವಾರದಿಂದ ಬಿಡುಗಡೆ ಹೊಂದಿ ತಪಸ್ಸೆಂಬ ಲಕ್ಷ್ಮಿಯನ್ನು ಅಪ್ಪಿದನು. ಇತ್ತ ತಂದೆಯು ತನಗೆ ಒಪ್ಪಿಸಿ ಹೋದ ಮಂತ್ರಿ ಪದವಿಯನ್ನು ನ್ಯಾಯನಿಷ್ಠೆಯುಳ್ಳ ವನೂ, ಶಿಕ್ಷೆರಕ್ಷಣೆಗಳಲ್ಲಿ ನಿಪುಣನೂ ಆದ ಮರುಭೂತಿಯು ನಿಸ್ಸಂಕೋಚವಾಗಿ ಸ್ವೀಕರಿಸಿದನು.

ಅತುಳ ಪರಾಕ್ರಮಕ್ಕೆ ಸುನಯಂ. ವಿಭವಕ್ಕೆ ಪರೋಪಕಾರಂ, ಅಸ್ಖಿತ ವಚನಕ್ಕೆ ಸತ್ಯಂ, ಅಱಿವಿಂಗೆ ಸದಾಚರಣಂ ಕುಲಕ್ಕೆ ಪೆಂಪು. ಪುಣ್ಯದೇೞ್ಗೆ ಉದ್ಯಮಂಗಳು ಸಹಾಯಕಗಳಾಗುವಂತೆ ನಿಜಪತಿ ಅರವಿಂದ ಮಹಾಪ್ರಭುಗಳಿಗೆ ಮರುಭೂತಿ ತಂತ್ರ-ಮಂತ್ರಾಲೋಚನೆಗಳಲ್ಲಿ ಸಹಾಯಕನಾಗಿ. ರಾಜನ ಸಮಸ್ತ ಸಪ್ತಾಂಗಗಳ ವೃದ್ಧಿಗೆ ಮುಖ್ಯವಾಗಿರುವ ಐಶ್ವರ್ಯದ ಅಭಿವೃದ್ಧಿಯನ್ನು ಮಾಡಿ. ನೀತಿ ವಿಶಾರದನಾಗಿ, ಯಜಮಾನನಿಗೆ ಪ್ರೀತಿಯನ್ನುಂಟುಮಾಡುತ್ತ ಆಜ್ಞಾನುವರ್ತಿಯಾಗಿರುತ್ತಿರಲು ಒಂದು ದಿನ ಅತುಳೈಶ್ವರ್ಯ ಸಂಪದ್ಭರಿತನಾದ ಅರವಿಂದ ಮಹಾರಾಜನು ಸಮಸ್ತಾಂತಃಪುರಪುರಂಧ್ರೀ ನೀರಂಧ್ರಘನಸ್ತನೋದಾರಹಾರವಾರ ವಿಳಾಸನೀಸಮೇತಂ ನೀತಿನಿಧಾನಪ್ರಧಾನಪ್ರಮುಖ ನಿಖಿಳಪರಿವಾರ ಪರೀತನುತ್ತುಂಗಸಿಂಹಾಸನಾಸೀನನಾಸ್ಥಾನ ಮಂಡಳ ಮಧ್ಯಮ ನಳಂಕರಿಸಿ. ಸಂಗೀತ ನೃತ್ಯ ರಾಗಸಾಗರದಲ್ಲಿ ಓಲಾಡುತ್ತಿರುವಾಗ ಚರನೊರ್ವಂ ಪರಿತಂದು, ದೇವಾ. ಧುರೋದ್ಧುರಶೌರ್ಯಂ ವಜ್ರವೀರಂ ನಿಮ್ಮಾಜ್ಞೆಯಂ ಮೀಱಿ ದೇವರ ಠಾಣಾಂತರಮಂ ತಿರಸ್ಕರಿಸಿ ಸ್ತ್ರೀಬಾಳರಂ ವೃದ್ಧರಂ ಕಾದಿ ಗೋಳಿಡಿಸಿದಂ ಎಂದು ಬಿನ್ನವಿಸಿದನು. ರಾಜನು ಸಭೆಯಲ್ಲಿ ಅನುಭವಿಸುತ್ತಿದ್ದ ಶೃಂಗಾರ ರಸಕ್ಕೆ ವಿರುದ್ಧವಲ್ಲದ ವೀರರಸವನ್ನು ಪ್ರಕಟಿಸುವುದರಲ್ಲಿ ನಿಪುಣನೆನಿಸಿದ್ದ ದೂತನು ಹೇಳಿದ ಮಾತುಗಳಿಂದ ಸಭೆಗೂ. ಸಭಾಪತಿಯಾದ ಅರವಿಂದರಾಜನಿಗೂ ರೌದ್ರರಸವು ಉದ್ರೇಕಗೊಳ್ಳಲು, ಕೋಪದಿಂದ ರಾಜನ ಕಡೆಗಣ್ಣು ಕೆಂಪಾಯ್ತು, ಕಪೋಲಸ್ಥಲದಲ್ಲಿ ಬೆಮರಾಯ್ತು. ಒಟ್ಟಿನಲ್ಲಿ ಅರವಿಂದರಾಜನ ಮುಖಮಂಡಲ ಕೋಪೋದ್ರಿಕ್ತವಾಯ್ತು. ಇದನ್ನು ಕಂಡ ಆಹವಲಂಪಟರಾದ ಸುಭಟಾಗ್ರಣಿಗಳು ತಂತಮ್ಮ ಪರಾಕ್ರಮಗಳನ್ನು ವಿಸ್ತರಿಸುತ್ತ

ತಾವೇ ದಂಡೆತ್ತಿಹೋಗಿ ವಜ್ರವೀರನನ್ನು ಸೋಲಿಸಿ ಸೆರೆಹಿಡಿದು ತರುವುದಾಗಿ ಸಭೆಯಲ್ಲಿ ಘೋಷಿಸಿದರು. ಬೆಸನಂ ಬೇಳ್ಪುದು ಭಟರ್ಗೆ ಉಚಿತಂ, ಅಂತೆ ಅಧಿಪನುಂ ಮಾಮಸಕಂ ಮಸಗಿ ನುಡಿದಂದು ಪೆಂಪೆಂತೆಸೆದಪುದು? ಅದಱಿಂದೆ ಮಾಡಿ ತೋರ್ಪೆಂ ಕೂರ್ಪಂ ಎಂದು ಬಗೆಯೊಳ್ ಪರಿಚ್ಛೇದಿಸಿ, ವಿಜಯಪ್ರಸ್ಥಾನ ಭೇರಿಯುಂ ಪೊಯ್ಸುಗಡೆಂದು ಬಳಾಧಿಪಂಗೆ ವಿಭು ನಿಯಮಿಸಿದಂ. ಆಗ ಸಹಜ ಪ್ರಜ್ಞನುಂ ಅಶೇಷನೀತಿ ಶಾಸ್ತ್ರಜ್ಞನುಮಪ್ಪ ಮರು ಭೂತಿ ಮುಖ್ಯರಪ್ಪ ಮಹಾಪ್ರಧಾನರು "ಮಂತ್ರಪೂರ್ವಕಾಃ ಸರ್ವೇ ಕಾರ್ಯಾರಂಭಾಃ ಕ್ಷಿತಿ ಪತೀನಾಂ" (ರಾಜರು ಎಲ್ಲಾ ಕಾರ್ಯಗಳನ್ನೂ ಮಂತ್ರಾಲೋಚನೆಯ ಪೂರ್ವಕವಾಗಿಯೇ ಮಾಡಬೇಕು) ಎಂಬ ನೀತಿಯನ್ನು ಸ್ವಾಮಿಯವರು ಮನಸ್ಸಿಗೆ ತೆಗೆದುಕೊಳ್ಳಬೇಕು. ಹಾಗಲ್ಲದೆ ಸಾಹಸಪಟ್ಟು ಯಾವ ಕೆಲಸ ವನ್ನೂ ಆರಂಭಿಸಕೂಡದು ಎಂದು ಹೇಳಿದ ಮಾತನ್ನು ರಾಜನು ಮನಗೊಂಡು. ಸಭೆಯನ್ನು ವಿಸರ್ಜಿಸಿ. ಮಂತ್ರಿಮುಖ್ಯ ರೊಡನೆ ಮಂತ್ರಶಾಲೆಯನ್ನು ಪ್ರವೇಶಿಸಿ ಮಂತ್ರಾಲೋಚನೆಯಲ್ಲಿ ತೊಡಗಿದಾಗ ನಯಶಾಸ್ತ್ರಪಾರಂಗತನಾದ ಮರುಭೂತಿಯು. ಚತುರೋಪಾಯಗಳಲ್ಲಿ ಸಾಮವನ್ನೂ. ಷಾಡ್ಗುಣ್ಯಗಳಲ್ಲಿ ಮೊದಲನೆಯದಾದ ಸಂಧಿಯನ್ನೂ ಅನುಸರಿಸಿ ಅದಕ್ಕೆ ಬಗ್ಗದಿದ್ದರೆ ದಂಡಪ್ರಯೋಗವನ್ನು ಮಾಡಬಹುದೆಂದು ಹೇಳಿ ಸರ್ವಸಮ್ಮತಿ ಯನ್ನು ಪಡೆದು. ಸಹಜ ಪ್ರಜ್ಞನೂ. ಅಶೇಷ ದೇಶಲಿಪಿಸಮ್ಭಾಷಾ ವಿಶೇಷಜ್ಞನೂ ನೀತಿ ಮಾರ್ಗಕ್ಕೆ ತಕ್ಕ ಮಾತನಾಡುವವನೂ. ಉತ್ತಮವಾದ ಗುಣಗಳನ್ನು ತಿಳಿಯತಕ್ಕವನೂ. ಸತ್ವವುಳ್ಳವನೂ. ಜಿತೇಂದ್ರಿಯನೂ. ಕೋಪವಿಲ್ಲದವನೂ ಆಗಿರುವ ಸಂಧಿವಿಗ್ರಹಿ ಯಾದ ಮರುಭೂತಿಯು ರಾಜನಿಂದ ಆಜ್ಞಪ್ತನಾಗಿ. ಉಚಿತ

ಮೆಸಿಪ್ಪ ವಚನದಿಂದ ರಾಜೋಕ್ತ ಕ್ರಮದಿಂದ ರಾಯಸಮಂ ಬರೆದು ಆಗಳೆ ಮುದ್ರಿಸಿ, ಪಸಾಯಮಂ ಕಟ್ಟಿ, ಧೀರನೂ, ವಕ್ರೋಕ್ತಿಯನ್ನು ತಿಳಿದವನೂ, ಭಯಕ್ಕೆಡೆಗುಡದವನೂ, ನೀತಿ ಮಾರ್ಗವನ್ನು ತಿಳಿದವನೂ, ನಿಪುಣನೂ, ಪರರ ಮನಸ್ಸನ್ನು ತಿಳಿಯುವ ಶಕ್ತಿಯುಳ್ಳವನೂ ಮತ್ತು ಸ್ಪಷ್ಟವಾಗಿ ಮಾತನಾಡು ವವನೂ ಆದ ದೂತ ಮುಖ್ಯನನ್ನು ಬರಿಸಿ ಬರೆದ ರಾಯಸಮುಮಂ ಕಟ್ಟಿ ಮುದ್ರಿಸಿದ ಪಸಾಯಮುಮಂ ಕೊಟ್ಟು ವಿಜಯಕಾರ್ಯಸಿದ್ಧಿ ಯಕ್ಕೆಂದು ಕಳುಹಿಸಿದನು.

ಆ ದೂತಮುಖ್ಯನು ಅತ್ಯಂತ ತ್ವರಿತಗತಿಯಿಂದ ಪ್ರಯಾಣ ಮಾಡುತ್ತ ಅನೇಕ ದೇಶಗಳನ್ನು ದಾಟಿ ಸೌಂದರ್ಯಕ್ಕೆ ತವರುಮನೆ ಯೆಂತಿರ್ದ ಪದ್ಮನಗರಕ್ಕೆ ಬಂದು. ನಯನ ಮನೋಹರವಾಗಿದ್ದ ರಾಜಬೀದಿಯನ್ನು ದಾಟಿ ಅರಮನೆಗೆ ಬಂದು, ರಾಜನಿಂದ ಅಪ್ಪಣೆ ಪಡೆದು ರಾಜನಾಸ್ಥಾನ ಮಂಟಪವನ್ನು ಪ್ರವೇಶಿಸಿ. ವಜ್ರವೀರನ ಮುಂದೆ ನಿಂತು. ತನ್ನಾಜ್ಞೆಗೆ ಅಧೀನವಾದ ಅನೇಕ ರಾಜ್ಯ ದೇಶ ಗಳುಳ್ಳ ನಮ್ಮೊಡೆಯನ ಅಪ್ಪಣೆಯಿದೆಂದು ಹೇಳಿ ತಾನು ತಂದಿದ್ದ ಉಪಾಯನ ಕರಂಡಕವನ್ನೂ, ಪತ್ರವನ್ನೂ ಅತಿ ಪರಾಕ್ರಮಿಯಾದ ವಜ್ರವೀರನ ಮುಂದಿಳಿಸಿ ತನಗೆ ಉಚಿತವಾದ ಸ್ಥಳದಲ್ಲಿ ಕುಳಿತು ಕೊಂಡನು. ಸಂಧಿ-ವಿಗ್ರಹಗುಣಗಳುಳ್ಳ ವಜ್ರವೀರನ ಪ್ರಧಾನನು ಆ ಕರಂಡಕದ ಮುದ್ರೆಯನ್ನೊಡೆದು ಅದರೊಳಗಿದ್ದ ಹಲವು ವಿಧವಾದ ರತ್ನಾಭರಣಗಳನ್ನೆಲ್ಲಾ ಬೇರೆ ಬೇರೆಯಾಗಿ ರಾಜನಿಗೆ ತೋರಿಸಿ ಅನಂತರ ಪತ್ರವನ್ನೋದಿದನು. 'ಸ್ವಸ್ತಿ ಸಮಸ್ತರಾಜ ಗುಣರಾಜಿತ ರಾಜ ಸಮಾಜ ಮಸ್ತಕ ನ್ಯಸ್ತ ಪದಾರವಿಂದನರವಿಂದ ಮಹೀಪತಿಯುಂ, ವಜ್ರವೀರನಂ ವಾಸ್ತವಭಕ್ತಿಯುಕ್ತನಂ, ಅನಾಗ್ರಹ ದಿಂದೆ ಬೆಸಪ್ಪನ್ ಎಂಬ ಮಾತನ್ನು ಆಲಿಸಿದ್ದೆ ತಡ. ವಜ್ರವೀರನ

ದುಸ್ತರ ಕೋಪವಹ್ನಿಗೆ ಘೃತಾಹುತಿಯಾಯ್ತು. ಆ ಪತ್ರವನ್ನು ಓದಿಯಾದಮೇಲೆ ನಯನಿಪುಣನಾದ ಅರವಿಂದರಾಜನ ದೂತನು, ಕುಡುವುದು ಕಪ್ಪಮಂ, ನಡೆವುದಾಳ್ವೆಸದಿಂದಮು ಮುನ್ನಿನಂದದಿಂ, ಬಿಡುವುದು ದರ್ಪಮಂ. ಪಡೆವುದಾಳ್ದನದೊಂದು ಮನಃ ಪ್ರಸಾದ ಮಂ, ತಡೆವುದು ಬುದ್ಧಿಯಲ್ತು. ಅಧಿಕನಪ್ಪವನೊಳ್ ಬಲಹೀನ ನಪ್ಪವಂ ತೊಡದರ್ದೊಡೆ ಕೇಡು ತಪ್ಪದು; ಆಶ್ರಿತವತ್ಸಲನಾದ ನಮ್ಮ ಮಹಾರಾಜ ಅನ್ಯರ ತಪ್ಪುಗಳೆಷ್ಟಿದ್ದರೂ ನಮಸ್ಕರಿಸಿದ ಕೂಡಲೇ ಮರೆತು ಕ್ಷಮಿಸುವನು. ಆದುದರಿಂದ ನಮ್ಮ ರಾಜನಿಗೆ ನಮಸ್ಕರಿಸಿ ಈಗಿರುವಂತೆಯೇ ಸಮಸ್ತವನಿತಾ ವಿತ್ತ ರಾಜ್ಯ ಸಂಪತ್ತಿನಿಂದ ಕೂಡಿರು. ಈಗ ನೀನು ದಂಡೆತ್ತಿ ಬಂದು ನನ್ನಪ್ಪಣೆ ಯನ್ನು ಮೀರಿ ಮಾಡಿರುವ ತಪ್ಪನ್ನು. ಹಿಂದೆ ನೀನು ನನ್ನಾಜ್ಞೆ ಯನ್ನು ನಡೆಸಿದುದಕ್ಕಾಗಿ ಕ್ಷಮಿಸಿರುವೆನು ಎಂಬ ತನ್ನ ಹಿರಿಮೆಗಾಗಿ ನನ್ನನ್ನು ನಿನ್ನ ಬಳಿಗೆ ಕಳುಹಿಸಿರುವನು. ಇವಂ ಬಗೆದು ಪತಿಗೆ ವಿನಮಿತನಾಗಾ ಎಂದು ತನ್ನನ್ನಧಃಕರಿಸಿದ ದೂತನ ಮಾತನ್ನು ಕೇಳಿ ಅತ್ಯಂತ ಕ್ರೋಧೋನ್ಮತ್ತನಾದ ವಜ್ರವೀರನು—ದುಷ್ಟನಿಗ್ರಹ ಶಿಷ್ಟಪರಿಪಾಲನಾ ವಿಧಿಯನ್ನು ತಿಳಿದಿರುವ ಶ್ರೇಷ್ಠನಾದ ರಾಜನಿಗೆ ತಕ್ಕುದಾದ ಹೆಚ್ಚಳಿಕೆಯನ್ನು ನೀನು ನಿನ್ನ ರಾಜನಲ್ಲಿ ಆರೋಪಿಸಿ ಹೇಳಿದರೆ ಅದನ್ನು ಮೆಚ್ಚುವವರಾರು. ಸೈರಿಸುವವರಾರು?

"ವೀರ ಭೋಜ್ಯಾ ವಸುಂಧರಾ" ಎಂಬ ವಾಕ್ಯವನ್ನು ಸ್ವಲ್ಪವೂ ಭಾವಿಸದೆ ವಸುಧೆಗಧೀಶ್ವರನಾನೆಂಬೆಸಕಂ ಮಿಗೆ ನೆಟ್ಟನೆ ನಿನ್ನ ನಟ್ಟಿದಂ ನಿನ್ನರಸಂ. ನನ್ನ ಮುಂದೆ ಯುದ್ಧಕ್ಕೆ ನಿಲ್ಲುವವನು ನನ್ನ ಕತ್ತಿಯಿಂದ ಮೊದಲು ಸಾಯುವವನು ಎಂದ ಮೇಲೆ ನನ್ನನ್ನು ಕಪ್ಪವನ್ನು ಕೊಡೆಂದು ಕೇಳುವವನೂ. ನಾನು ಮಾಡಿದುದು ತಪ್ಪೆಂದು ಹೇಳುವವನೂ ಆದ ಶೂರಾಗ್ರಣಿ ಯಾವನಾದರೂ

ಇರುವನೇ? ನನ್ನೊಡನೆ ಯುದ್ಧಕ್ಕೆ ನಿಂತವನನ್ನು ಗೆಲ್ಲುವೆನೆಂದಿರುವ ನನ್ನ ಬಾಹುಬಲವನ್ನೂ, ನನ್ನ ಕೋಟೆಯನ್ನು, ಮತ್ತು ನನ್ನ ಸೈನ್ಯವನ್ನೂ ಗೆಲ್ಲುವ ಸಾಹಸವುಳ್ಳವನು ಮಾತ್ರ "ನಾನು ಆಜ್ಞೆ ಮಾಡಿದುದನ್ನು ನೀನು ನಡೆಸಬೇಕು" ಎಂದು ನನಗೆ ಹೇಳಿಕಳುಹಿಸುವುದು ನ್ಯಾಯ. (ಆದರೆ ನಿಮ್ಮರಸ ನನ್ನನ್ನು ಗೆಲ್ಲಲಾರ. ಆದುದರಿಂದ ಈ ಆಜ್ಞೆ ಅನುಚಿತ). ತನ್ನ ಬಿರುಸಿನಿಂದಲೇ ಸಮಸ್ತ ಧರಿತ್ರಿಯ ದರ್ಪವನ್ನು ಅಡಗಿಸುವ ಸಿಡಿಲ ಡಾಣೆಗೆ ವಜ್ರದ ಕಟ್ಟುಗೊಟ್ಟವೋಲ್ ಎನ್ನಯ ತೋಳ್ವಲಕ್ಕೆ ನೆರಮಾಪರ್ ಅನೇಕ ಧರಾಧಿನಾಥರ್ ಅತ್ಯುನ್ನತ ಶೌರ್ಯರ್ ಎಂದೊಡೆ ಇದಿರಾಂಪರಾರ್ ಎನಗೆ ಆಜಿರಂಗದೊಳ್. ಹಿಂದೆ ಸ್ವಲ್ಪವಾಗಿದ್ದ ನನ್ನ ಸೈನ್ಯವನ್ನು ಸುಲಭವಾಗಿ ಗೆಲ್ಲಬಹುದಾಗಿತ್ತು. ಆದರೆ ಈಗ ಬಹುವಾಗಿರುವ ನನ್ನ ಸೈನ್ಯವನ್ನು ಗೆಲ್ಲುವವನಾರಿರುವನು. ಮನಸ್ಸಿನಿಂದ ನೆನೆಯುವುದಕ್ಕೂ ಕಣ್ಣಿನಿಂದ ನೋಡುವುದಕ್ಕೂ ಶಕ್ಯವಿಲ್ಲದ ನನ್ನ ಕೋಟೆಯನ್ನು ಮುತ್ತಿಕೊಳ್ವನಾವಂ? ಎಂದು ತನ್ನ ಅಪೂರ್ವಮುಂ ದರ್ಪಮುಮಂ ನುಡಿದು. ಸೂರ್ಯನ ಸಂಚಾರವನ್ನು ತಡೆಯುವಷ್ಟು ಎತ್ತರವಾಗಿರುವ ನನ್ನ ಕೋಟೆಯನ್ನು ಮುತ್ತಿಕೊಳ್ವ ತೇಜಸ್ವಿಗಳಾರಿಪ್ಪಾರೆ? ಹಿಂದು ಮುಂದನ್ನು ಸ್ವಲ್ಪವೂ ಆಲೋಚಿಸಿದೆ ನಿಜಾಧೀಶಂ ನಯಹೀನನಪ್ಪುದೊಡೆ ನೀಂ ತಂದ ಆದೇಶಮಿದು ನಿಮ್ಮ ದೇಶ ವಿನಾಶಮುಂ ನಾಂ ಮಾಡುವೆಡೆಗೆ ಸಿದ್ಧಾದೇಶಂ–ಎಲವೋ ದೂತ! ಗೌರವಿಸುವವರಿಗೆ ಆದೇಶವನ್ನು ಕಳುಹಿಸುವುದು ನ್ಯಾಯ, ಅದನ್ನು ಬಿಟ್ಟು ಅದನ್ನು, ನನ್ನಲ್ಲಿಗೆ ಕಳುಹಿಸಿರುವುದು ನಿಮ್ಮ ಆ ದೇಶವನ್ನು ಕೊಡುವುದನ್ನು ಸೂಚಿಸುವುದಿಲ್ಲವೆ? ಅರೆಸಂ ವೃದ್ಧಂ, ಅಮಾತ್ಯಂ ಶಿಶು, ನಿರುಪಮಮತಿ ವಿಶ್ವಭೂತಿಯಿಲ್ಲಪ್ಪು

ದಱಿಂ ದೇಶಕಾಲಮುಂ ಸ್ವಪರಬಳಾಂತರಮುಮನಱಿವನ್ನರಿನ್ನಾರ್? ಹಾಗೆ ಬಲ್ಲವರಿದ್ದಿದ್ದರೆ ನಿಮ್ಮರಸ ಇಷ್ಟನ್ನು ಹೇಳಿಕಳುಹಿಸುತ್ತಿದ್ದನೆ? ಈಗ ಕಳುಹಿಸಿದುದಕ್ಕೆ ತಕ್ಕಂತೆ ನಾಳೆ ಯುದ್ಧಕ್ಕೆ ಬರಹೇಳು. ಅಲ್ಲಿ ಬಲ್ಲಿದರಾರ್. ವಿಹೀನ ಬಳರಾರ್. ವಿಭುವಾರ್. ಭೃತ್ಯರಾರ್ ಇಂತಿವೆಲ್ಲವನ್ನೂ ನಾಳೆ ಅಲ್ಲಿ ಸಂಗರದಲ್ಲಿ ನಿನ್ನ ಪತಿಗಂ ನಿನಗಂ ತೋಱಿದಪ್ಪೆಂ ಎಂದು ಹೇಳಿದನು.

ಅದನ್ನು ಕೇಳಿದ ದೂತನು—ಎಲೆ ವಜ್ರವೀರನೆ. ನಮ್ಮೊಡೆಯನು ಶೌರ್ಯ ಪ್ರದರ್ಶನ ಮತ್ತು ಯಶಸ್ಸಂಪಾದನೆಗಳಲ್ಲಿ ಮಾತ್ರ "ಸೀಮಾತಿಕ್ರಮ"ವನ್ನೂ. ಸ್ತ್ರೀಯರ ಕುಚದಲ್ಲಿ ಮಾತ್ರ "ಉದ್ವೃತ್ತತೆ" ಎಂದರೆ (ದಪ್ಪನಾಗಿ ಗುಂಡಾಗಿರುವುದು) ಒರಟುತನವನ್ನೂ. ಕವಿತಾ ಸಂಬಂಧದಲ್ಲಿ ಮಾತ್ರ "ವಕ್ರೋಕ್ತಿ" ಎಂದರೆ ಕೊಂಕು ಮಾತನಾಡುವುದನ್ನು ಸೈರಿಸುವನೇ ಹೊರತು ಅನ್ಯಥಾ ಸೈರಿಸುವವನಲ್ಲ. ಲೋಕಾಧಿಪತಿಯಾದ ನಮ್ಮ ರಾಜನನ್ನು ನಿಂದಿಸುವ ಈ ಕುನಯಮುಮನಿತ್ತು ಕೇಡನೊಡರಿಸುವ ನೃಪಾನೀಕದ ಪಕ್ಷಂಬಡೆದು ಇಱುಂಪೆಗೆಱಂಕೆ ಮೂಡಿದಪ್ಪೊಲಾದಪೆಯೇಕೆ? ಅತ್ಯಂತ ಪರಾಕ್ರಮವುಳ್ಳ ಸಿಂಹದೊಡನೆ ಯುದ್ಧ ಮಾಡುವ ಸಾಹಸದಿಂದ ಆನೆಯು ಅನ್ಯಮೃಗ ಜಾತಿಗಳೊಳ್ ನಿಜಜಾತಿ ವೈರಮಂ ಬಿಸುಟು ಒಡಗೂಡುವಂದದೊಳೆ ನಿನ್ನೊಡಗೂಡಿದ ಭೂಪರುಂ ಮದಪ್ರಸರದೆ ನೀನುಂ ಅಂತು ನಿಲೆ ಗೆಲ್ಲವೆ ನಿಲ್ಲನಧೀಶನಾಜಿಯೊಳ್. ನೀನು ಹೊಗಳಿಕೊಳ್ಳುವ ನಿನ್ನ ಗಿರಿದುರ್ಗದ ಕಲ್ಲುಗಳು ನಿಮ್ಮ ದೇಶದಲ್ಲಿ ಪಾಳೆಯವನ್ನು ಬಿಟ್ಟು ತಂಗುವ ನಮ್ಮೊಡೆಯನ ಸೈನ್ಯಕ್ಕೆ ಒಲೆಯ ಕಲ್ಲಿಗೂ ಸಾಲುವುದಿಲ್ಲ. ನಿನ್ನ ಜಲದುರ್ಗದ ನೀರು ನಮ್ಮ ಸೈನ್ಯದ ಜನರ ಅಡಿಗೆಯ ಎಸರ್ಗೆ ಸಾಲುವುದಿಲ್ಲ. ಬಹುದೊಡ್ಡದೆನಿಸುವ ನಿನ್ನ ವನದುರ್ಗವು ನಮ್ಮ ಸೈನ್ಯದ

ಅಡುಗೆಗೆ ಬೇಕಾದ ಸೌದೆಗೂ ಸಾಕಾಗುವುದಿಲ್ಲ ಎಂದಮೇಲೆ ನಮ್ಮ ರಾಜನ ಸೈನ್ಯವನ್ನು ನಿಮ್ಮಲ್ಲಿ ಇದಿರಿಸಿ ನಿಲ್ಲಬಲ್ಲವರಾರು? ನಿನ್ನ ಜಲದುರ್ಗಂ ನಮ್ಮ ಜನಪತಿಯ ಸೇನೆಗಾಪೋಶನಕ್ಕೆ, ಅಚಳದುರ್ಗಂ ಪದಘಟ್ಟಣೆಗೆ, ವನದುರ್ಗಂ ಅದರ ಗುಡಿಯ ಗೂಂಟಕ್ಕೆ ಏನನುಂ ಎಯ್ದುವು. ಇನ್ನು ನಮ್ಮ ರಾಜನನ್ನು ವೃದ್ಧನೆಂದೂ, ಮಂತ್ರಿಯನ್ನು ಬಾಲಕನೆಂದೂ ಹೇಳಿದ್ದು ಸರಿಯೆ! ನೀನೆಣಿಸಿದಂತೆ ರಣ ಪರಿಣತ ವಯಸನಪ್ಪನವನೀಪತಿ, ನಯಪಥಪ್ರಕಾಶನಗುಣದಿಂ ತರುಣ ತರಣಿಯೊಳೆಣೆ ಸಚಿವಂ; ಆದರೆ ರಣ ಬಾಳಕನಪ್ಪೆ ನೀಂ. ಆದುದರಿಂದ ನಮ್ಮ ರಾಜನು ವಿಧಿಸಿರುವ ಪ್ರಕಾರ ನೀನು ಈ ಪತ್ರವನ್ನು ನಿನ್ನ ಶಿರದೊಳಾಂತು ಗೌರವಿಸಿ ನಿನ್ನ ರಾಜ್ಯವನ್ನು ನೀನೇ ಸುಖದಿಂದ ಆಳು. ಅಲ್ಲದೊಡೆ ನಮ್ಮರಸನ 'ಅಸಿಪತ್ರವು' ನಿನ್ನ ತಲೆಗೆ ಬರುತ್ತದೆ ಎಂದು ನುಡಿದ ನುಡಿಗೆ ಕಿಡಿಕಿಡಿವೋಗಿ ಸಿಡಿಲ ಕಿಡಿಯಂ ತಳದೊಳೋರಸುವಂತೋಲೆಯಂ ಮುಱಿದೊರಸಿ ಕಳಿಪೆ ದೂತಂ ಕನಲ್ದಿಂತೆಂದಂ— ಆಳೋಚಿಸದೆ ಅವಲೇಪದಿನೋಲೆಯನಿದನ್ ಉಱದೆ ಮುಱಿದು ಕಳೆದೈ. ನಿನಗಂ ಕಾಳಸೆ ಕನಲ್ದು ನಿಜ ವಂಶಾವಳಿಗಂ ಓಲೆಯನೆ ಮುಱಿದನೆಂದಱಿ. ಪ್ರಳಯ ಕೋಂಕಂ ಕಿರ್ಚು ತಿರ್ದುವಂತೆ ಆಹವದೊಳ್ ನಯಮಂ ಕೈಕೊಳ್ಳದ ನಿನ್ನಯ ವಕ್ರತೆಯಂ ಮದೀಶನಿಶಿತಾಸಿಘವಾಗ್ನಿಯೆ ನೀಳ್ದು ತಿರ್ದುಗುಂ. ನಯವಾದುದೂ, ಮೃದುವಾದುದೂ ಆದ ನನ್ನ ಬಾಣವು ಎಂದರೆ ಮಾತು ನಿನಗೆ ಹೃದಯಂಗಮವಾಗದೆ (ಮನಸ್ಸಿಗೊಪ್ಪಿಯಾಗದೇ) ಹೋದರೂ, ಶತ್ರುಭಯವನ್ನು ಬೀರುವ ನನ್ನ ಸ್ವಾಮಿಯ ಬಾಣವು (ಅಂಬು) ನಿನಗೆ "ಹೃದಯಂಗಮ"ವಾಗದೇ ಹೋದೀತೆ? ಎಂದರೆ ಹೃದಯವನ್ನು ಹೊಕ್ಕು ಇರಿಯದೆ ಬಿಟ್ಟೀತೆ? ಎಂದ

ದೂತನ ಮಾತಿಗೆ ಮುನಿದು ವಜ್ರವೀರಂ ಘನಪೀಠದಿನೆಟ್ಟ ಅವಧ್ಯನಾದ ದೂತನನ್ನು ವಧಿಸಲು ಬಾಳಂ ಕಿಟ್ಟಿ ಪೊಯ್ಯಲೆಟ್ಟಿ ನನ್" ಆರಯ್ಯದಿಂತಕಾರ್ಯರ್ಮಮಂ ದೂತನೇಗೆಯ್ದೊಡಂ ಪ್ರಭು ವೆನಿಪಂ ನೆಗೞಲಾಗ"ದೆಂದು ನುಡಿದು ಕೆಯ್ಯ ಪಿಡಿದು ನಯ ವಿದರಾದ ಆಪ್ತರೆನಿಪಮಾತ್ಯರು ನಿವಾರಿಸಿದ ನಂತರ ಹೇಳಿದ ಬಾಯಿಗೆ ಬಂದಂತೆ ಔದ್ಧತ್ಯದಿಂದ ಹರಟಿದ ಈ ದೂತನೇನೋ ವಧ್ಯನಲ್ಲ. ಆದರೆ ಇಷ್ಟನ್ನು ಹರಟುವಂತೆ ನನ್ನಲ್ಲಿಗೆ ಹೇಳಿಕಳುಹಿ ಸಿರುವ ಅವನ ಒಡೆಯನು ಅವಧ್ಯನಾಗುವನೆ? ಅದುದರಿಂದ ಅವನನ್ನು ನನ್ನ ಕ್ರೂರವಾದ ಈ ಕತ್ತಿಯಿಂದ ಕಡಿದು ಬಿಸಾಡು ವೆನು ಎಂದ ವಜ್ರವೀರನ ಉದ್ಧತೆಯುಮನ್ ಉನ್ಮತ್ತತೆಯುಮಂ ಕಂಡು ದೂತಂ ಮತ್ತಮಿಂತೆಂದಂ—ಎನ್ನ ಮಾತುಗಳಿವು ಅಜ್ಞರ್ಗೆ ಪ್ರತಿಕೂಲೋಕ್ತಿಗಳ್, ವಿವೇಕಾನ್ವಿತರ್ಗೆ ಅತಿ ಪಥ್ಯಂಗಳೆನಿಕ್ಕುಂ; ನೀನೀಗಳೆಂತುಂ ಮಹೋದ್ಧತನ್ಯೆ, ಈಗ ಕಾಣೆ, ನಾಳೆ ಮದೀಶ್ವರಂ ಬರೆ ರಣಪ್ರಾರಂಭದೊಳ್ ಕಾಣ್ಬೆ ಎಂದು ಚರಂ ನಿರ್ಭೀತಚೇತಂ ನುಡಿದಂ. ಓ ವಜ್ರರಾಜನೆ! ನೀನು ನಾಳೆಯು ಯುದ್ಧದಲ್ಲಿ ನಮ್ಮೊಡೆಯನ ಪರಾಕ್ರಮಕ್ಕೆ ಸೋತು ಶರಣಾಗತನಾದರೂ ಅಥವಾ ಹೆದರಿ ಯುದ್ಧರಂಗವನ್ನು ಬಿಟ್ಟು ಓಡಿಹೋದರೂ. ನಿನಗೆ (ವಿವಿಧ...ಭುವನಾಶ್ರಯ...ದೇಶಂ ಎಂಬಿವು ದೊರೆಕೊಳ್ಳು ವುವು) ಎಂದರೆ ಶರಣಾಗತನಾದರೆ ಮೃಗಗಳ ಕಣ್ಗಳಂತೆ ಚಂಚಲ ವಾದ ಕಣ್ಗಳುಳ್ಳ ನಿನ್ನ ಸ್ತ್ರೀಯರೊಡಗೂಡಿ ಸುಖಪಡುವಿಕೆಯೂ. ನಿನ್ನ ರಾಜ್ಯಭೋಗವೂ. ಹಾಗೆಯೇ ನಿನ್ನ ಶ್ರೇಷ್ಠವಾದ ಕೋಟೆಯೂ (ಸಾಲ). ಮತ್ತು ಒಪ್ಪುವ ನಿನ್ನದಂಡೂ (ಕಟಕ) ಮತ್ತು ನಿನ್ನ ವಂಶಪಾರಂಪರ್ಯವಾಗಿ ಬಂದಿರುವ ವೈಭವವೂ ಮತ್ತು ಪ್ರಸಿದ್ಧವಾಗಿದ್ದ (ನೆಗೞ್ದ + ೯೦) ಹಣವುಳ್ಳ ನಿನ್ನ ದೇಶವೂ

ನಿನಗೇ ಉಳಿಯುವುದು. ಹಾಗಲ್ಲದೆ ಯುದ್ಧರಂಗವನ್ನು ಬಿಟ್ಟು ಓಡಿಹೋದರೆ, ನೀನು ಕಾಡನ್ನೇ ಸೇರಿ ಜೀವಿಸಬೇಕಾಗಿರುವುದ ರಿಂದ, ಅಲ್ಲಿ ಜಿಂಕೆಗಳ ನೋಟವೂ (ಮೃಗೇಕ್ಷಣಾಳಿ), ಒಳ್ಳೆಯ ಕುಂಟೆಗಳೂ, (ಭುವನಾಶ್ರಯ), ಶ್ರೇಷ್ಠವಾದ (ಸಾಲ) ಸಾಲ ವೆಂಬ ಮರಗಳೂ, ಬೆಟ್ಟಗಳ ನಡುವಣ ಪ್ರದೇಶವೂ (ಕಟಕ), ಒಳ್ಳೆಯ ಬಿದಿರುಗಳ (ಸುವಂಶ) ಹಿಂಡಿಲುಗಳೂ, ಪ್ರಸಿದ್ಧವಾದ ಸೌದೆಗಳಿಗೆ ಯೋಗ್ಯವಾದ ಪ್ರದೇಶಗಳೂ ದೊರಕುವುವು. ಅಂದರೆ ಹೀಗೆ ಈ ಎರಡು ವಿಷಯಗಳಲ್ಲೂ ಒಂದೇ ಸಮನಾದ ಫಲ ವುಂಟೆಂದು ನೀನು ಈಗ ಔದ್ಧತ್ಯದಿಂದ ಮಾತನಾಡುತ್ತಿರುವೆ— ಎಂದು ಶ್ಲೇಷಾರ್ಥದ ಚಾತುರ್ಯದಿಂದ ವಜ್ರರಾಜನನ್ನು ಮೂದಲಿಸಿದನು. ಈಗ ನೀನು ಎಂತುಜಿದಿಜಿದ್ದೆ ದೇಶಮಂ, ಎಂತು ಈಶಾದೇಶಮಂ ಉಲ್ಲಂಘಿಸಿದ್ದೈ, ಎಂತು ಎನ್ನೊಳಿಡಜಿ ನುಡಿದ್ದೈ ಅಂತೆ ರಣಾಂಗಣದೊಳೊಡ್ಡಿ ನಿಲ್ ನಿರ್ಭಯದಿಂ. ಅಂತು ನಯಾಕ್ರಾಂತರ್ಗೆ ಸಂತೋಷಮುಮಂ ದುರಾಗ್ರಹ ಗ್ರಸ್ತರ್ಗೆ ವಿಗ್ರಹಾಗ್ರಹಮುಮಂ ಪುಟ್ಟಿಸುತ್ತ ಆಸ್ಥಾನಮಂ ಪೊಜಿಮಟ್ಟು ಕತಿಪಯ ಪ್ರಯಾಣದಿಂ ನಿಜರಾಜಧಾನಿಗೆ ಬಂದು ಅರಮನೆಯಂ ಪೊಕ್ಕು ಸಿಂಹಾಸನಾಸೀನನಾಗಿರ್ದ ಅರವಿಂದ ಮಹಾರಾಜನ ಪಾದಾರವಿಂದಕ್ಕೆ ಸಾಷ್ಟಾಂಗವೆಜಗಿ ಪೊಡೆವಟ್ಟು ತನ್ನ ಪೋದ ಬಂದ ವೃತ್ತಾಂತ ಮೆಲ್ಲಮಂ ಸವಿಸ್ತರಂ ಬಿನ್ನವಿಸಿ ದನು. ಇದನ್ನು ಆಲಿಸಿದ ಅರವಿಂದ ಮಹಾರಾಜನು ಯುದ್ಧ ರಂಗದಲ್ಲಿ ಜಯಶ್ರೀಯು ತನ್ನನ್ನು ಸೇರುವಳೆಂದು ನಿಶ್ಚಯಿಸಿ ಉತ್ಸಾಹವನ್ನು ತಾಳಿ ಬಳಾಧ್ಯಕ್ಷನನ್ ಅಕ್ಷೂಣಸಮರದಕ್ಷನಂ ಬರಿಸಿ ವಿಜಯಪ್ರಯಾಣಭೇರಿಯಂ ಪೊಯ್ಸೆಂದು ನಿಯಮಿಸಲು ಅವನು ಬಾರಿಸಿದ ಪ್ರಸ್ಥಾನ ಭೇರೀರವ ಭುವನವನ್ನು ತುಂಬಿತು.

ಅನಂತರ ಅರಪಿಂದ ರಾಜನು ಶುಭಮುಹೂರ್ತದಲ್ಲಿ ಮದದಾನೆಯ ಹೆಗಲನ್ನೇರಿ ರಾಜಬೀದಿಯಲ್ಲಿ ತನ್ನ ಸಮಸ್ತ ಚತುರಂಗ ಬಲಸಮೇತನಾಗಿ ಹೊರಟು ಊರ ಹೊರಗೆ ನಿರ್ಮಿಸಿದ್ದ ಶಿಬಿರದಲ್ಲಿ ಬೀಡುಬಿಟ್ಟನು. ರಾಜನೊಂದಿಗೆ ಬಂದ ಮಂತ್ರಿಗಳು, ಮಾಂಡಳಿಕರು, ಸಾಮಂತರು ಮುಂತಾದವರನ್ನು ಅವರ ಪರಿವಿಡಿಯಿಂದ ಪಡೆವಳನು ತಂಗಲು ಏರ್ಪಾಡು ಮಾಡಿದನು.

ಅರಸನು ವೈಹಾಳಿಗೆ ಹೋದರೆ ಮಂತ್ರಿಯಾದವನು ಹಿಂದೆ ನಿಲ್ಲುವುದು ಅನುಚಿತವೆನಿಸಿದಾಗ ಸಂಗರದೆಡೆಗೆ ನಡೆಯುತಡೆವುದು ಸೇವಕಂಗೆ ಪಾಟೀಯೆ ಎಂದು ತನ್ನ ತಾಯಿ ಅಸುಂದರಿ ಹಾಗೂ ಅಣ್ಣ ಕಮಠಂಗೆ ನುಡಿದು ನೀವು ನನಗೆ ಹೇಳಬೇಕಾದ ಬುದ್ಧಿವಾದವನ್ನು ಹೇಳಿ ಕಳುಹಿಸಿ ಕೊಡಿ ಎಂದು ಹೇಳಿ ಮತ್ತೆ ನಿಮ್ಮ ಪರಿವಾರಮಂ ಸೊಸೆಯಂ ಮನ್ನಿಸ ಮಾಟ್ಕೆಯಿಂದೆ ಬೆಸಕೆಯ್ಸಿಕೊಳುತ್ತ ಉಮ್ಮಳಿಸದಿಪ್ಪುದು, ಅಂಬಿಕೆ ನಿಮ್ಮಾಶೀರ್ವಾದವೆನಗೆ ವಜ್ರಕವಚಂ. ಎನ್ನಿಂದಧಿಕಮೆನೆ ಸೊಸೆಯಂ ನಡೆಯಿಪ, ಸೊಸೆಯಿನಗ್ಗಳಂ ಕೆಳದಿಯರಂ ಮನ್ನಿಸಿ ನಡೆಯಿಪ ಮೈಮೆ ನಿಮಗೆನೆ ಮಗುಟೆ ಜನನಿ ಬಿನ್ನವಿಸಲದೇಂ ಎಂದು ಪರಿಜನವನ್ನು ಸಮರ್ಪಿಸುವ ನೆವದಲ್ಲಿ ಚತುರ ವಚನ ವಿಚಕ್ಷಣನೆನಿಪ ಮರುಭೂತಿ ಪ್ರಾಣೇಶ್ವರಿಯುಪ್ಪ ವಸುಂಧರಿಯಂ ಸಮರ್ಪಿಸಿ ತಾಯಿಗೆ ನಮಸ್ಕರಿಸುತ್ತಾನೆ. ಎರಗಿದ ಮಗನನ್ನು ಬಿಗಿದು ತಬ್ಬೈಸಿ ಗುಣಾಭರಣ ನಿಜವಿಜಯಭುಜದೊಳ್ ಧರಿಯಿಸು ಜಯವಧುವನೆಂದು ಒಲವಿಂದ ಹರಸಿದ ತಾಯಿ ನಲ್ವರಕೆಗಳಂ ತಳೆದು ನಂತರ ನಿಜಾಗ್ರಜಂಗೆ ಕೆಯ್ಗಳಂ ಮುಗಿದು ತಂದೆಯವರು ನಿಮ್ಮನ್ನು ನಿಶ್ಚಿಂತರನ್ನಾಗಿಸುವ ಕಾರಣದಿಂದ

ಭಾರವಾದ ಮಂತ್ರಿಪದವಿಯನ್ನು ಎನ್ನೀಸಿರದೊಳ್ ತಂದಿಟ್ಟೊಡಂ ನೀವೇ ನನಗೆ ಗುರು (ಅಣ್ಣ)ವಾಗಿರುವುದರಿಂದ ಈ ಭಾರವೂ ನಿಮ್ಮದೇ ಆಗಿದೆ. ಸೇವಕನಪ್ಪವನು ಹಸಿವು, ನೀರಡಿಕೆ, ಶೀತ, ಆತಪ ಬಾಧೆಗಳಿಗೆ ತನುವನ್ನೊಡ್ಡಿ ದುಃಖಪಡುವುದು ನಿಯತಂ. ನೀಮುಪ್ಪೊಪ್ಪದೆ ಸೌಖ್ಯಮೂರ್ತಿಗಳ್ " ಪ್ರಟ್ಟಿರ್ದಂತೆ ಕೆಯ್ ಬೇಯ ಲೇಕೆಯೊ ಪೇಟೆಂ "ದು ಇದನಾಂತೆನ್. ಅಲ್ಲದೆ ನೀಮಿರ್ದಂತಿರೆ ಈ ಪದಕೆ ಆಂ ಯೋಗ್ಯನೆ. ನಾನು ಅಣ್ಣನಾದ ನಿನ್ನಲ್ಲಿ ರಾಜ್ಯ ಭಾರದ ವಿಷಯವನ್ನು ವಿಜ್ಞಾಪಿಸಿಕೊಳ್ಳುವುದು ಹಾವು ಜಗತೀ ಭಾರವನ್ನು ಹೊರುವ ವಿಷಯವನ್ನು ಆದಿಶೇಷನಲ್ಲಿ ಬಿನ್ನವಿಸಿ ಕೊಳ್ಳುವ ರೀತಿಯಲ್ಲಿದೆ. ತಂದೆಯು ಪರೋಕ್ಷದೊಳ್ ನೀಂ ತಂದೆಯೆ ಎನಗೆ. ಆದರಿಂದ ಅಮಳಗುಣ ಸಂಪದದೊಳ್‌ನಿಂದ ನಿನಗೆ ಯಾವ ರೀತಿಯಿಂದಲೂ ನಿಂದೆ ದಿಟಂ ಪೊರ್ದದಂತು ನಡೆ ನಿಯತತೆಯಿಂ. ಜನನಿಗೆ ಬೆಸಕಯ್ವುದು, ನಾದುನಿಯಿಂ ಬೆಸಕೆಯ್ಸಿಕೊಳ್ವುದು, ಅನವರತಂ ಸಜ್ಜನ ಗೋಷ್ಠಿಯೊಳಿರ಼್್ಪುದು, ದುರ್ಜನವಂ ಪರಿ ಹರಿಪ್ಪುದು, ಉಜಿವುದಸದಾಗ್ರಹಮಂ, ಉದ್ವೇಗಂ ಪೆಱಗಾಗ ದಂದದಿಂ ಭೋಗಮನನುಭವಿಸುವುದು: ಉದಾರವಾದ ನಡತೆ ಯಿಂದ ಕೀರ್ತಿಯನ್ನೂ, ಪುಣ್ಯವನ್ನೂ ಕೈಲಾದಷ್ಟು ಮಟ್ಟಿಗೆ ಸಂಪಾದಿಸುತ್ತ ಸುಖದಿಂದಿರಿ ಎಂದು ಮಂತ್ರಿ ಮುಖ್ಯಂ ಕಮಠಂಗೆ ಸಮಸ್ತಭಾರಮಂ ಸಮರ್ಪಿಸಿ ವಿನಯ ಪುರಸ್ಸರಂ ಬೀಳ್ಕೊಂಡು, ಬಳಿಕ ತನ್ನ ಪ್ರಿಯಪತ್ನಿಯಾದ ವಸುಂಧರೆಯನ್ನು ಬಳಿಗೆಕರೆದು ನಾನು ಯುದ್ಧಕ್ಕೆ ಹೋಗುವೆನು, ತಡೆಯದೆ ಬರ್ಪೆಂ ನೆನೆದೆರ್ದೆಗಿಡದಿರು, ಮಜ್ಜನನಿಯಲ್ಲಿ ನಿನ್ನಯ ವಿನಯಂ ಗೆಡದಿರು, ದುಷ್ಟರ ನುಡಿಗೆಡೆಗುಡದಿರು, ಬಿಡದಿರು ಕುಲಕ್ರಮೋಚಿತಗತಿಯಂ ಎಂದು ಬುದ್ಧಿ ಹೇಳಿದನು. ಗಂಡನು ದಂಡಿಗೆ ಹೋಗುವ

ಸುದ್ದಿಯನ್ನು ಕೇಳಿ ಬಿಸಿಲಿಗೆ ಸಿಕ್ಕಿದ ಎಳಲತೆಯಂತೆ ಕಂದಿ. ಪ್ರಬಲವಾದ ಪುಷ್ಪಬಾಣಗಳುಳ್ಳ ಮನ್ಮಥನ ದಂಡೆಲ್ಲವೂ ಒಂದೇ ಬಾರಿ ತನ್ನ ಮೇಲೆ ಬೀಳಲು ಬಂದಂತೆ ಭಯವಿಹ್ವಲೆಯಾದ ಹೆಂಡತಿಯನ್ನು ಕುರಿತು—ಎಲೆ ಕೃಶಾಂಗಿಯೆ! ಕುಸುಮಕೋಮಲ ವಾದ ನಿನ್ನ ಶರೀರವು ಎಳೆ ಬಿಸಿಲಿನಿಂದ ಬಿಸಿಯಾದ ಗಾಳಿ ಬೀಸಿದರೇ ಹೂವನ್ನು ತೀಡಿದಂತೆ ಕಂದಿಹೋಗುವುದೆಂದು ತಿಳಿದಿದ್ದರೂ, ನಿರ್ಬಂಧದಿಂದ ಅನಿವಾರ್ಯವಾಗಿ ಹೋಗಲೆ ಬೇಕಾಗಿರುವುದರಿಂದ ನಿನ್ನನ್ನು ಬಿಟ್ಟುಹೋಗುತ್ತಿದ್ದೇನೆ, ಅಲ್ಲ ದಿದ್ದರೆ ಹೀಗೆ ಹೋಗುತ್ತಿದ್ದೆನೆ ಎಂದು ಮುಂತಾದ ಸಾಂತ್ವನ ವಚನಗಳಿಂದ ಸಂತೈಸಲು—ವಸುಂಧರೆ ತನ್ನ ಪತಿಯ ಮಾತನ್ನು ಕೇಳಿ, ಪುರುಷಕ್ಷೇಮವಿಶೇಷಮಂ ಬಯಸಿ. ತನ್ನಂ ತಾನೆ ಸಂತಯ್ಸಿ ಸಸ್ಮೇರ ಸರೋಜನೇತ್ರೆ ಭರದಿಂದಂ ಶೇಷೆಯಂ ತೀವಿದಳ್. ಹೆಂಡತಿಯು ಹರಸಿ ಇಟ್ಟ ಬಿಡಿಮುತ್ತಿನ ಶೇಷಾಕ್ಷತೆಗಳನ್ನು ಆಕೆಯ ಕಡೆಗಣ್ಣ ಕಾಂತಿಸಂತಾನವೆಂಬ ಹೊಸಜಾಜಿ ಹೂವಿನ ಮಾಲೆ ಯೊಡನೆ ತಿಳಿದವನಾಗಿ. ಮಂತ್ರಿ ಮುಖ್ಯನಾದ ಮರುಭೂತಿಯು ಜಯಲಕ್ಷ್ಮಿಯನ್ನು ವಿವಾಹಮಾಡಿಕೊಳ್ಳಲು ಹೊರಡುವ ಹೊಸ ಮದುವಣಿಗನಂತೆ. ಶುಭಶಕುನಗಳನ್ನು ನೋಡುತ್ತ ಪರಿವಾರ ದೊಡನೆ ತನ್ನ ಶಿಬಿರಕ್ಕೆ ಬಂದನು. ಪಾಳೆಯದಲ್ಲಿದ್ದ ಇತರ ಸುಭಟರೂ ತಂತಮ್ಮ ಪತ್ನಿಯರನ್ನು ಮೃದುವಚನಗಳಿಂದ ಸಂತೈಸಿ ಸಮಾಧಾನಪಡಿಸಿದರು. ಅರವಿಂದ ಮಹಾರಾಜನು ಬೆಳಗೆದ್ದು ಪ್ರಾತರ್ವಿಧಿಗಳನ್ನು ತೀರ್ಚಿ. ಜಿನಪೂಜೆಯನ್ನು ಅತ್ಯಂತ ವೈಭವದಿಂದ ಮಾಡಿ, ರಾಜಪೋಷಾಕನ್ನು ಧರಿಸಿ, ಮಂಗಳಮಯ ರನ್ನಗನ್ನಡಿಯಲ್ಲಿ ಮುಖಾರವಿಂದವನ್ನು ಈಕ್ಷಿಸಿ. ಅರಿರಾಯನ ದುರ್ಗವನ್ನು ಕುರಿತು ಪ್ರಯಾಣಮಾಡಿ ವಜ್ರವೀರನ ದುರ್ಗವನ್ನು ಮೂವಳಸಾಗಿ ಸುತ್ತಿ ಮುತ್ತಿದನು.

ಇತ್ತ ರವಿಶಶಿಗಳು ಗಗನವನ್ನು ಅಗಲಿದಾಗ ತಮಸ್ಸೇ ಅಧೀಶನಾಗುವಂತೆ ಅರವಿಂದ ಮರುಭೂತಿಯರು ಇಲ್ಲದ ರಾಜ್ಯಕ್ಕೆ ಅವಿನಯಪರನೆನಿಪ ಕಮಠನೇ ಅಧಿಪತಿಯಾದನು. ಈತನ ಸ್ವಭಾವವನ್ನು ಅರಿತಿದ್ದ ರಾಜನು ಕೊಡೆ ಮೊದಲಾದ ಎಪ್ಪತ್ತೆರಡು ನಿಯೋಗಿಗಳಲ್ಲಿ ಒಂದನಪ್ಪೊಡಂ ಕುಡದೊಡಮೇನು, ಅತಿ ನಿರ್ಲಜ್ಜನಾದ ಕಮಠನು ಔದ್ಧತ್ಯದಿಂದ ತನಗೆ ತಾನೆ ಮಹತ್ವವನ್ನು ಕಲ್ಪಿಸಿಕೊಂಡನು. ಇಂಥ ದುರ್ವೃತ್ತನಿಗೆ ನೃಪನ ಲಸಲ್ಲತಾಂಗಿಯರೆ ತನ್ನ ಲತಾಂಗಿಯರ್, ನೃಪದ್ವಿಪಮೆ ನಿಜದ್ವಿಪಂ ನೃಪನ ಭೂಷಣರಾಜಿಯೆ ತನ್ನ ಭೂಷಣಂ, ನೃಪನ ತುರಂಗಮುಂ ನಿಜತುರಂಗಮುಮಾಗೆ, ನೃಪಾಳಲೀಲೆಯುಂ ಚಪಳಚರಿತ್ರನಾಂತು ಉದ್ಧತಂ ನೃಪಮಂದಿರದೊಳ್ ನೆಲಸಿರ್ದಂ, ಇರುಳು ಕೊಡೆಯನ್ನು ಹಿಡಿಸಿಕೊಂಡು, ಹಗಲು ದೀವಟಿಗೆಗಳನ್ನು ಹಿಡಿಸಿಕೊಂಡು ನಿರರ್ಥಕಂ ತನ್ನ ಚರಿತಂ ಎಂಬುದನ್ನು ಅಱಿಪುತ್ತ ತಿರುಗುತ್ತಿದ್ದನು. ಕುಂಕುಮ, ಕಸ್ತೂರಿ, ಕನಕದ ಪುಡಿಯಿಂದಾದ ಹಿಟ್ಟನ್ನು ತನ್ನ ಸಿರಿಯನಿರದೆ ತೂರುವ ತೆರದಿಂದ ಕೆದರಿಸುತ್ತ ನಡೆಯುತ್ತಿದ್ದನು. ಪರಿಮಳವನ್ನು ಸೂಸುತ್ತಿರುವ ಧೂಪವರ್ತಿಯ ಪೊಗೆಯು ತನ್ನ ಉರಿಗೊಳ್ಳಿತನವನ್ನು ಅವನಿಗೆ ನಿರವಿಸುತಿರಲು ಪಟ್ಟಣದ ಬೀದಿ ಬೀದಿಗಳಲ್ಲಿ ಸುತ್ತುತ್ತಿದ್ದನು. ಹೇಳುವುದಿನ್ನೇನು? ತನ್ನ ಸಿರಿಗೆ ಇನ್ನು ಜೀವನವಿಲ್ಲೆಂಬ ರೀತಿಯಲ್ಲಿ, ಕಂಡವರು ಅಯ್ಯೋ ಎನ್ನುತ್ತಿರಲು, ಹಗಲು-ರಾತ್ರಿ ಕರ್ಪೂರದ ತೈಲದಿಂದ ದೀಪವನ್ನುರಿಸುವನು. ವಾರಣಮೇಱಿ ಬೆಳ್ಗೊಡೆಯನೆತ್ತಿಸಿ ಬರ್ಪುದದೊರ್ಮೆ, ಮಲ್ಲರಂ ಪೋರಿಪುದೊರ್ಮೆ, ಕಂದುಕದ ಕೇಳಿಯೊಳಿರ್ಪುದದೊರ್ಮೆ, ಸಾರಶೃಂಗಾರವಿಳಾಸಮುಂ ಮೆಱೆವುದೊರ್ಮೆ, ಖಗೋದ್ಧತಮೇಷಯುದ್ಧಮುಂ ವಾರವಧೂ

ಜನಂಬೆರಸು ನೋಡುವುದೊರ್ಪು. ಇದು ಆತನ ವಿನೋದದ ರೀತಿ. ಮಹಾಶಠನಾದ ಈ ಕಮಠನು ಅನೇಕ ಉಪಾಯಗಳಿಂದ ಪರಸ್ತ್ರೀಯರೊಂದಿಗೆ ಕೂಟವನ್ನು ಏರ್ಪಡಿಸುವ, ಎಲ್ಲೆಮೀರಿದ ಜೂಜಾಟವನ್ನು 'ಆಡಿಸುವ ಅತಿಧೂರ್ತ ವಿಟರಿಗೆ, ನಟರಿಗೆ, ಭಂಡಮಂಡಳಿಗೆ, ಒಡನಾಡುವವರಿಗೆ, ಗಣಿಕಾಳಿಗೆ ಹಗಲು ರಾತ್ರಿ ಬೇಡಿದುದನ್ನು ಕೊಟ್ಟು ತನ್ನ ಗೌರವವನ್ನೂ, ವಂಶಪಾರಂಪರ್ಯವಾಗಿ ಬಂದಿದ್ದ ಕುಲಧನವನ್ನೂ ಹಾಳುಮಾಡಿದನು. ಇವನ ಈ ದುರ್ವರ್ತನೆಯನ್ನು ಕಂಡ ಮಹೀಮಂಡಳದ ಜನಂಗಳೆಲ್ಲಮಿಂತೆಂಗುಂ ಪಿತೃದಾದವನ್ನು ಧನವನ್ನಿಟ್ಟಾರೆ ಕೆಡಿಸುವರೆಂದು ತಿಳಿದು ಯಶೋಧನವನ್ನು ಬಿಟ್ಟುಹೋದರೂ ಕೆಡಿಸುವ ಮಕ್ಕಳಿರುವಾಗ, ಮನೆಯಲ್ಲೇ ಇಟ್ಟುಹೋಗಿರುವ ಐಶ್ವರ್ಯವನ್ನು ನಾಶಮಾಡುವುದಿಲ್ಲವೆ? ಕಮಠನು ಕುಲಧನವನ್ನು, ವಂಶಕೀರ್ತಿಯನ್ನೂ ನಾಶಮಾಡಿದನು. ಒಮ್ಮೆ ತೊಟ್ಟು ಉಟ್ಟುದನ್ನು ಮತ್ತೊಮ್ಮೆ ತೊಡದೆ, ಕೇಳಿದವರಿಗೆ ನೀಡುವನು. ತೊಟ್ಟ ಆಭರಣವನ್ನು ಕೇಳಿದ ಕೂಡಲೇ ಅರ್ಥಿಗೆ ನೀಡುವನು ಎಂದರೆ ಆಶ್ಚರ್ಯವೇನು? ಒಡೆಯರ ಕಣ್ ತಪ್ಪುವುದನೆ ತುಡುಗುಣಿ ನಾಯುಳಿಪಿ ನೋಡುವಂತೆ, ಅವಕಾಶಕ್ಕಾಗಿ ಕಾಯುತ್ತಿದ್ದ ಈ ಜಡಮತಿ ಕಮಠನು ಅವಕಾಶ ಸಿಕ್ಕಿದ ಕೂಡಲೇ ಸೈತು ನಡೆಯಲೇನಜಿದಪನೇ? ಒಡೆಯನು ಖಳನೂ, ಅಬಲನೂ, ಅಧಿಪನೂ, ಉಚ್ಛೃಂಖಲನೂ, ಅಪನಯನೂ ಆದರೆ ಕಲಿಯೂ, ತರುಣನೂ, ಪ್ರಬಲನೂ, ಮದಕಳಿತನೂ, ಮಾವುತನಿಲ್ಲದವನೂ ಆದ ಆನೆಯಂತೆ ಅವನು ಎಂಥ ಅಕಾರ್ಯವನ್ನು ತಾನೆ ಮಾಡಲಾರ? ಚಪಲಸ್ವಭಾವದವನು ಶೂಲಕ್ಕೇರಿದಾಗಲೂ ಅದರ ಮೇಲಿನ ಪಾಯಸವನ್ನುಣ್ಣಲಪೇಕ್ಷಿಸುವಂತೆ, ತನ್ನ ರಾಜನ ತೀವ್ರ ತೇಜ

ಮನ್ನೇಜಿಸಿ ಈ ರೀತಿಯಲ್ಲಿ ಕಮಠನು ರಾಜಲೀಲೆಯನ್ನು ಹೊಂದಿದನು. ಅಂತೂ ನಾಚಿಕೆಯಿಲ್ಲದವನು ತಲೆಗೆ ಪಾದರಕ್ಷೆಯನ್ನು ಕಟ್ಟಿಸಿಕೊಂಡ ಹಾಗೆ ಲೋಕವಿರುದ್ಧವಾದುದನ್ನೇ ಮಾಡಿ ಪಾಪಕರ್ಮಿಯಾದನು. "ನಿಯತಿಃಕೇನ ಲಂಘ್ಯತೇ" (ವಿಧಿ ನಿಯಮವನ್ನು ಮೀರುವವರಾರು?) ತಂದೆ ವಿಶ್ವಭೂತಿಯು ಅವನನ್ನು ಮಂತ್ರಿಪದವಿಯಲ್ಲಿ ನೇಮಿಸದೇ ಹೋದರೂ ರಾಜ್ಯವು ಅವನ ಕೈಸೇರಿತು.

ದುರ್ವ್ಯಸನಿಗಳಿಗೆ. ಅಧರ್ಮ ಪ್ರವರ್ತಕರಿಗೆ ಸಹಾಯಕರು, ಆಪ್ತರು ಬಹಳ. ಅಂತೆಯೇ ದುರಾತ್ಮನಾದ ಕಮಠನಿಗೆ ಚತುರ್ಗತಿಗಳಲ್ಲಿ ಅಲೆಯಲು ಕಾರಣವಾದ ನಾಲ್ಕು ಕಷಾಯಗಳಂತೆ ನಾಗರಕರು, ವಿಟರು, ವಿದೂಷಕರು. ಪೀಠಮರ್ದಕರು ಎಂಬ ದುಷ್ಟಚತುಷ್ಟಯಗಳು ಕೂಡಿಕೊಂಡು "ಮೂಗಿನೊಳು ಟ್ಟಿಪಂಗೆ ಕುಟುಮಂ ಕೊಡುವಂತೆ" ವಾತ್ಸ್ಯಾಯನಾದಿ ಕಾಮಕಲಾ ಶಾಸ್ತ್ರಾದಿಗಳನ್ನು ಕಲಿಸಿದರು. ಇವನ ವ್ಯಸನಂ ಜಾದಿನೊಳೆ, ರತಿವ್ಯಸನಂ ಪರದಾರಾಗಮನದೊಳ್ ನಿಜದಾನವ್ಯಸನಂ ಅಸಜ್ಜನರೊಳೆ ಪಸರಿಸಿತು. ಕಮಠನಿಗೆ ಕಿತವರೆ ನಂಟರ್, ಜೂದಿನ ದೀಂಟೆಯ ನೆಲಸಿರ್ಪ ತಾಣಂ, ಅನ್ಯಾಂಗನೆಯಂ ಕಂಟಿಸದೆ ತಂದು ಕೊಡುವ ಕೂಂಟಣಿಗಳವಂಗೆ ಮಾನ್ಯರ್. ಆ ಕಮಠನು ಏಕಾಂತದಲ್ಲಿ ಮಾಡುತ್ತಿದ್ದುದೆಲ್ಲವೂ ವ್ಯಭಿಚಾರವೇ (ಪರಸ್ತ್ರೀ ಗಮನ): ಬಹಿರಂಗವಾಗಿ ಮಾಡುತ್ತಿದ್ದ ಕೆಲಸವೆಲ್ಲವೂ ಸೂಳೆಯರೊಡನಾಟವೇ ಆಗಿತ್ತು. ಕಾಮಾಂಧನಾದ ಈ ಕಮಠನು ಮುಂದೆ ತನಗೆ ಇದೇ ಗತಿಯಕ್ಕುಮೆಂಬುದನರಿಪಂತೆ ಕುಂದಜೀಯದೆ ಪೆಟಿಪೆಣ್ಗಳ ಮುಂದಲೆಯಂ ಕೊಯ್ವಂ. ಮದಾಂಧನಾದ ಕಮಠನು ಪರಸ್ತ್ರೀಯರ ಮೈಯಲ್ಲಿ ತನ್ನ ಅಪಕೀರ್ತಿಯ ವರ್ಣನೆಯನ್ನು

ಬರೆದಿಡುವಂತೆ, ತನಗುಂಟಾಗುವ ಸ್ಥಾನ ಚ್ಯುತಿಯನ್ನು ಸೂಚಿಸುವ ನಖಕ್ಷತ ಚಿಹ್ನೆಗಳನ್ನು ಮಾಡುತ್ತಿದ್ದನು. ರಾಜನಿಗೆ ಪ್ರಿಯವಾಗಿದ್ದ ಅನರ್ಘ್ಯವಪ್ಪ ಮಣಿಭೂಷಣಗಳನ್ನೆಲ್ಲಾ ತೊಟ್ಟು, ರಾಜನ ಉಡುಪುಗಳನ್ನು ಧರಿಸಿ, ರಾಜನ ವಾಹನವುಸಲಂಪಿಂದೇಱಿ. ರಾಜನ ವಾರಾಂಗನೆಯರನೆಲ್ಲ ಭೋಗಿಸಿಯೂ ಮಾಣದೆ. "ಗಂಡಸ್ಯೋಪರಿ ಸ್ಫೋಟಂ" (ಗಂಟಿನ ಮೇಲೆ ಕುರು ಎದ್ದಂತೆ) ಎಂಬ ನಾಣ್ನುಡಿಯನ್ನು ಸಫಲ ಮಾಡಿ ತನ್ನ ನಾದಿನಿಯಾದ ವಸುಂಧರೆಯಲ್ಲಿ ಅನುರಕ್ತನಾದನು. ದಿನದಿಂದ ದಿನಕ್ಕೆ ಉಲ್ಬಣ ಗೊಳ್ಳುತ್ತಿದ್ದ ವಿರಹವ್ಯಥೆಯನ್ನು ತಾಳಲಾರದೆ "ದುಃಖಿತೇ ಮನಸಿ ಸರ್ವಮಸಹ್ಯಂ" ಎಂಬ ನುಡಿ ದಿಟಮಾಗೆ ತನ್ನ ಮನದನ್ನನಪ್ಪ ಕೆಳೆಯನಂ ಕರೆದು ತನ್ನ ಮನಸ್ಸಿನ ದುರವಸ್ಥೆ ಯನ್ನು ಹೇಳಿಕೊಂಡನು. ಇದಾವ ಗಹನಂ ಎಂದು ಹೇಳಿ ವಸುಂಧರೆಯ ಬಳಿಗೆ ಬಂದು ನಿಮ್ಮ "ಭಾವ ಕಮಠನು ಅತಿ ಯಾದ ಸಂತಾಪದಿಂದ ಬೇಸಗೆಯ ಬಿಸಿಲಿನಿಂದ ಪೂರ್ಣವಾಗಿ ಬತ್ತಿಹೋದ ಕೆರೆಯಲ್ಲಿರುವ ಆಮೆಯಂ (ಕಮಠನಂ)ತೆ ಬಹಳ ವಾಗಿ ಬಾಧೆ ಪಡುತ್ತಿರುವನು" ಎಂದ ಮಾತಿಗೆ ಋಜುಸ್ವಭಾವದ ವಸುಂಧರೆ "ನನ್ನನ್ನೀಗಲೇ ಅಲ್ಲಿಗೆ ಕರೆದುಕೊಂಡು ಹೋಗು" ಎಂದು ಹೇಳಿ ಕೂಡಲೇ ಅಲ್ಲಿಗೆ ಬಂದು, ಬಗೆದೊಡೆ ರುಜೆ ನಿನಗೆ ಎಮ್ಮತ್ತೆಗಂ ಎಮ್ಮಕ್ಕಂಗಂ ಎನಗಂ ಅಱಿಪದೆ ನೀನುಬ್ಬೆಗದಿಂ ಪ್ರವಾಸಿಗನವೋಲ್ ಅಗಲದೆ ವನದೊಳಗೆ ನಿಲ್ವುದನುಚಿತ ಮಲ್ತೇ? ಕಳಹಂಸಕನಱಿಪಿದೊಡೆ ಈಗಳಱಿದೆಂ. ಈ ರೋಗ ಮಾವುದು? ಆವನೊ ವೈದ್ಯಂ ತಳರದೆ ನೋಡುವಂ? ಎನಿತಾಯ್ತೊಳಂಘನಂ? ಯೋಗಮಾವುದೀ ರುಜೆಗೆ? ಎಂದು ಋಜುಸ್ವಭಾವದಿಂದ ನುಡಿವರೆ ವಕ್ರಸ್ವಭಾವದ ಕಮಠನು—

ನಿನ್ನ ವಚನವಿದು ಸತ್ಯಂ, ನಿನ್ನ ವಿರಹದಿಂದೆ ಪ್ರವಾಸಿಗನೂ ಆದೆ, ವನವಾಸಿಯೂ ಆದೆ. ನಿನ್ನ ವಿಯೋಗವೆ ರೋಗಂ, ನಿನ್ನ ಆಗಮನವೆ ವೈದ್ಯಂ, ಇಂದು ಚಂದನ ಹಿಮಧಾರಾಗೃಹ ಲಂಘನ ಮಾದುದು, ಯೋಗಂ ಸಂಯೋಗಂ, ಈ ರುಜೆಗೆ ಪೆಱತುಂಟೇ? ಎಂದು ದುಷ್ಟನಾದ ಕಮಠನು ತನ್ನ ಮನಸ್ಸಿನ ಇಚ್ಛೆಯನ್ನು ತಿಳಿಸಲು, ಪ್ರಬಲವಾದ ಮೇಘಧ್ವನಿಯನ್ನು ಕೇಳಿದ ಹೆಣ್ಣು ಹಂಸೆಯೋ ಎಂಬಂತೆ ಮನಸ್ಸಿನಲ್ಲಿ ಕ್ಲೇಶಪಡುತ್ತಾ ಆಶ್ಚರ್ಯ ಚಕಿತೆಯಾಗಿ ಕೋಗಿಲೆಯಂತೆ ಮೌನ ತಾಳಿದಳು. ತನ್ನ ಮನೋ ವೃತ್ತಿಯನ್ನು ತಿಳಿದುಕೊಳ್ಳಬೇಕೆಂದು ಹೀಗೆ ಕೇಳಿರುವನೆಂದು ಭಾವಿಸಿ. ತನ್ನ ಮನಸ್ಸಿನ ಭಾವವನ್ನು ತಿಳಿಸದೆ, ಕೃತ್ರಿಮ ಭಾವ ದಿಂದ ಹೀಗೆ ನುಡಿದಳು. ಪೊಲ್ಲದುದಂ ಬಗೆದೈ; ನಿನಗಲ್ಲದುದಂ ನೆಗಱ್ದೆ, ನಮ್ಮ ಕುಲದುನ್ನತಿ ಮೇಗಿಲ್ಲದಪವಾದಭರದಿಂ ನಿಲ್ಲದೆ ಕಂಸಿದಪ್ಪುದು, ಉೞಿವುದಸದಾಗ್ರಹಮಂ ಎಂದು. ಆದರೆ ಕಾಮಾಂಧರು ಮುಂದಾಲೋಚನೆ ಮಾಡುವರೇ? ಆತನ ಮಾತಿಗೆ ಮರುಳಾಗಿ, 'ಚಿರವಿರಹದಿಂದೆ ಪೋಕುಂ ತರುಣೀ ಜನದೊಲ್ಮೆ' ಎಂಬಂತೆ ವಸುಂಧರೆ ಮರುಭೂತಿಯೊಳೊದವಿದ ಪರಮಪ್ರೀತಿಯನೆ ಮಱೆದು ಕಮಠನಲ್ಲಿ ಮೋಹಗೊಂಡಳು. ತಾಯ ಪೆಂಡತಿಯ ಪೇೞ್ದ ಹಿತಾಳಾಪಮನ್, ಆಪ್ತರ ನೀತಿ ಕಳಾಪಮನ್ ಉಱದೆ ಅವಳೊಳಾ ಖಳಂ ಮಱೆ ವಾೞ್ದಂ ಮರು ಭೂತಿಯು ಧೂರ್ತನಾದ ಕಮಠನಿಗೆ ರಾಜ್ಯದ ರಕ್ಷಣೆಯನ್ನು, ತನ್ನ ಸಂಸಾರದ ಮೇಲ್ವಿಚಾರಣೆಯನ್ನು ವಹಿಸಿಕೊಟ್ಟಿದ್ದು "ಬಿಡಾಳಕ್ಕಂ ಪಾಲ ಕಾಪನಿತ್ತವೊಲಾಯ್ತು" (ಬೆಕ್ಕನ್ನೇ ಹಾಲಿಗೆ ಕಾವಲಿಟ್ಟಂತಾಯ್ತು) ಎಂದು ಲೋಕದ ಜನರೆಲ್ಲ ಆಡಿಕೊಳ್ಳ ತೊಡಗಿದರು. ತನ್ನ ತಾಯ, ಕುಲಸ್ತ್ರೀಯ, ಕುಲವೃದ್ಧರ

ಬುದ್ಧಿಯೊಳೊಂದುಮಂ ಬಾಚಿತ್ತಿಗೆಯ್ಯದೆ. ಧೂರ್ತರೆ ತನಗಾಪ್ತರಾಗೆ ಉದ್ವೃತ್ತನಾಗಿ ಮೆರೆಯುತ್ತಿದ್ದನು. ಇತ್ತ ಅರವಿಂದ ಮಹಾರಾಜನು ಕಾಳಭೈರವನಂತೆ ಅರಿಭಯಂಕರನಾಗಿ ಘನ ಘೋರ ಯುದ್ಧವನ್ನೊಡ್ಡಿ ವಜ್ರವೀರನ ಸೇನೆಯನ್ನು ಬಗ್ಗು ಬಡಿದು ತಲೆ ಮರೆಸಿಕೊಂಡ ರಾಜನ ವಿಷಯವನ್ನು ತಿಳಿದು ಶರಣಾಗತ ಪರಿಪಾಲಕನಾದ ಅರಸು ಆತನ ಮಗನಿಗೆ ಆ ರಾಜ್ಯವನ್ನು ವಹಿಸಿ. ವಿಜಯವೀರಶ್ರೀಯನ್ನು ಪಡೆದು ತನ್ನ ಪಟ್ಟಣಕ್ಕೆ ಹಿಂತಿರುಗಿದನು.

ಅರಸನೊಂದಿಗೆ ಹಿಂತಿರುಗಿದ ಮಂತ್ರಿ ಮರುಭೂತಿಯು ನಿಜ ನಿವಾಸವನ್ನು ಪೊಕ್ಕು ಜನನಿಗಂ ಅಗ್ರಜಂಗಂ ಪೊಡೆವಟ್ಟು. ತನ್ನೊಡೆಯನ ಜಯಶ್ರೀಯನ್ನು ತಿಳಿಸಿ. ನಿಜಲಲನೆ ವಸುಂಧರೆಯ ಬಳಿಗೆ ಬರಲು ವಸುಂಧರೆಗೆ ತಾನು ಗೆಯ್ದ ದೋಷಕ್ಕೆ ಲಜ್ಜೆಯಿಂ ಬೆಮರುಂ ಕಂಪನಮುಂ ಉಂಟಾಗೆ ಅದು ತನ್ನ ಬಗೆಗಿರುವ ಒಲ ಮೆಂದು ಭಾವಿಸಿ ಸಂತೋಷಪಡುತ್ತಾನೆ. ಆದರೇನು? ಇಂಥ ತಪ್ಪುಗಳು ಎಷ್ಟು ದಿನ ತಾನೆ ರಹಸ್ಯವಾಗಿರಲು ಸಾಧ್ಯ! ಮರುಭೂತಿಗೆ ತನ್ನ ಅಗ್ರಜನ ದುರ್ವರ್ತನೆಗಳೆಲ್ಲ ತಿಳಿದರೂ ಮಡದಿಯರನರ್ಥಮುಳ್ಳೊಡೆ ಪಡೆಯಲ್ ಬರ್ಕುಂ ಸಹೋದರರ ನೇನಿತ್ತುಂ ಪಡೆವರೆ? ಪೆಂಡಿರ ದೂಸಱಿಂ ಒಡಹುಟ್ಟಿದರ್ಗೆಂತು ಮುಳಿಯಲಕ್ಕುಂ ತಕ್ಕುಂ ಎಂದು ಮನದೊಳಾಲೋಚಿಸಿ ನಿಜ ಪ್ರಿಯೆಯಂ ಪುಲ್ಲಿಂದ ಕೀೞಾಗಿ ಬಗೆದು. ತೊಱೆದು ಮನದೊಳ್. ಅಗ್ರಜನದಱಿಂ ನೊಂದಪನೆಂದು ಮುನ್ನಿನಂತೆ ನಡೆಯಿಸುತಿರ್ದಂ. ಅಣ್ಣನ ಈ ಕೆಟ್ಟವರ್ತನೆಗೆ ದೊರೆಯಿಂದ ಏನಪಾಯ ಸಂಭವಿಸುವುದೋ ಎಂದು ಚಿಂತಿಸುತ್ತಿರುವಂತೆಯೇ 'ಅಂಜಲಂಜಲ್ವೆಳಗಾದುದು' ಎಂಬಂತೆ ಬೆಳಗಾವಕೂಡಲೆ ವಿಷಯಾಂತರವನ್ನು

ತಿಳಿದ ಅರವಿಂದ ಮಹಾರಾಜನು ಮರುಭೂತಿಗೆ ಹೇಳಿ ಕಳುಹಿಸಿ ಕರೆಸಿಕೊಂಡು ಇಷ್ಟು ದಿನಗಳಲ್ಲಿ ನಿಮ್ಮಗ್ರಜನ ದುರ್ವರ್ತನೆಗೆ ತಕ್ಕ ಶಿಕ್ಷೆಯನ್ನು ನೀವೆ ಮಾಡುತ್ತೀರೆಂದು ಬಗೆದಿದ್ದೆವು. ಆದರೆ ನೀವು 'ಅಜೀವಪರೆ ಮೋಹ ವಿಘಟಿತಮತಿಗಳ್' ಎಂಬಂತೆ ಕೆಮ್ಮ ನಿರ್ದಿರಿ. ಈ ಮೊದಲೆ ನಿಮ್ಮ ತಂದೆ ಈತನಿಂದ ಮುಂದೆ ಸಂಭವಿಸಬಹುವಾದ ಅನಯುವನ್ನು ಅರಿದು ತೊರೆದರು. ನೀವು ಇದನ್ನು ಅರಿತಿದ್ದೂ ಸುಮ್ಮನಿರುವಿರಿ, ಸಾಕಿನ್ನು ಪರಿಹರಿಸಿರಿ ಎಂದು ಹೇಳಿದರೂ ನಾನು ಕೇಳದೇ ಇರುವುದನ್ನು ಹೇಳುತ್ತಿರು ವಿರಿ. ಅನುಕಂಪೆಯಿಂದ ಆತನನ್ನು ವಿಚಾರಿಪುದು ಎನ್ನುತ್ತಾನೆ. ಮುಚ್ಚುಮರೆ ಇಲ್ಲದುದಕ್ಕೆ ಪಿಸುಮಾತೇಕೆ? "ಊರುಟ್ಟು ನಾಡು ಮೇಲ್ಕೊಂಡುದುದಂ ಮುಚ್ಚಿಡುವುದೇಕೆ? ವಿನಯುನಿಧಿ ವಿಶ್ವಭೂತಿಗೆ ಜನಿಯಿಸಿ. ನಿಮ್ಮಗ್ರಜಾತನೆನಿಸಿ ಇಂಗಡಲ್ಗೆ ಅಮರ್ದಿನೊಡನೆ ವಿಷಮುದಯಿಪಂದದಿಂದಂ ಕಮಠಂ ದುರ್ಜನನಾದಂ. ಜನನಸ್ಥಾನಮದೊಂದಾದನಿತಜೀೂಳಿ ಸಮಾನ ಶೀಲಮಕ್ಕುಮೆ? ಶೀತವಾದ ಮೋಡದಿಂದಲೇ ಹುಟ್ಟಿದರೂ ಸಿಡಿಲು ಮಳೆಯಂತೆ ಜನರಿಗೆ ಹರ್ಷವನ್ನುಂಟುಮಾಡು ವುದೆ? ಆದ್ದರಿಂದ "ಭಿಂದಿ ಬಾಹುಮಪಿ ದುಷ್ಟಮಾತ್ಮನಃ" ಎಂಬ ನೀತಿಯನ್ನು ಅರಿತ ನೀವು ತ್ಯಜಿಸಬೇಕೆಂದು ಹೇಳಲು ರಾಜನ ಅಪ್ಪಣೆಯಂತೆ ಮನಸ್ಸಿಲ್ಲದ ಮನಸ್ಸಿನಿಂದ ತನ್ನ ಅರಮನೆಗೆ. ಹೋದನು. ಅರಸನು ತಳಾರನನ್ನು ಕರೆಸಿ. ಉದ್ದೀಪಿತಕೋಪ ನಾಗಿದ್ದರೂ ನೀತಿನಿಪುಣನಾಗಿದ್ದುದರಿಂದ ಮಹಾಪರಾಧಿಯಾಗಿದ್ದ ಕಮಠನಿಗೆ ಯತಿಗೂ-ಬ್ರಾಹ್ಮಣನಿಗೂ ಶಾಸ್ತ್ರವಿಧಿಸಿರುವ ಶಿಕ್ಷೆ ಯನ್ನು ಮಾಡುವಂತೆ. ಅಪ್ಪಣೆಮಾಡಿದನು. ಹಲವು ದಿವಸ ಗಳಿಂದ ದಂಡಿಸಬೇಕೆಂದು ಬಯಸಿದ್ದ ತಳವಾರನಿಗೆ ಇದರಿಂದ ಅತ್ಯಂತ ಸಂತೋಷವುಂಟಾಯಿತು.

ತಳವಾರನು ಕೋಪದಿಂದ ಕಮಠನನ್ನು ಹಿಡಿದುತಂದು ಬೀದಿಯ ಚೌಕದಲ್ಲಿ ಚೆನ್ನಾಗಿ ಹೊಡೆಯಬೇಕೆಂದು ಮನಸ್ಸಿನಲ್ಲಿ ಯೋಚಿಸುತ್ತಾ ಬರುತ್ತಿರಲು ಅಲ್ಲಿಯೇ ಒಂದು ದಿಣ್ಣೆಯಮೇಲೆ ಜೂಜಾಡುತ್ತಿದ್ದ ಕಮಠನನ್ನು ಕಂಡು, ಅರಮನೆಯಲ್ಲಿರದೆ ಮರುಭೂತಿ ಇಲ್ಲದ ಜಾಗದಲ್ಲಿ ಸಿಕ್ಕಿದುದರಿಂದ ಈತನನ್ನು ನನ್ನ ಮನಸಾರೆ ಶಿಕ್ಷಿಸಬೇಕೆಂದು ಭಾವಿಸಿಕೊಂಡು ಬಂದು ಕಮಠನನ್ನು ಹಿಡಿದು ಕಟ್ಟಿ ಚೆನ್ನಾಗಿ ಹೊಡೆದು ಅವಮಾನಪಡಿಸಿ ದಂಡ ಪಾಶಿಕನೆಂಬ ಹೆಸರನ್ನು ಸಾರ್ಥಕಪಡಿಸಿಕೊಂಡನು. ಇದನ್ನು ಕಂಡ ಜನರೂ ಅವನನ್ನು ಹೊಗಳಿದರು. ಇದುವರೆಗೆ ಅವನು ನಡೆಯುತಿದ್ದ ದುರ್ಮಾರ್ಗದಲ್ಲಿ ಜೊತೆಯಾಗಿದ್ದ ಧೂರ್ತಜನರೇ ದುರ್ಮಾರ್ಗಿಯಾಗಿ ತಳಾರನ ಕೈಗೆ ಸಿಕ್ಕಿದ ಕಮಠನನ್ನು ಬಯ್ದು, ಗಟ್ಟಿಸಿ, ಕೋಪದಿಂದ ಅವನ ತಲೆಯಲ್ಲಿ ಏಳು ಪಟ್ಟೆಗಳನ್ನು ಕೆರೆದು ಸೆಗಣಿಯಿಂದ ಹೊಡೆಯತೊಡಗಿದರು. ಅವನ ಸುತ್ತ ಮುತ್ತ ಇದ್ದ ಜನರು ಎಕ್ಕಡ. ಸೋರೆ ಬರುಡೆಗಳನ್ನು ಕಮಠನ ತಲೆಯ ಕೂದಲಿನ ಬತ್ತಿಗಳಿಗೆ ನೇತುಹಾಕಿದರು. ಅವನ ದುರ್ವೃತ್ತತೆಗೆ ತಕ್ಕಂತೆ ಅವನಿಗೆ ವೇಷವನ್ನು ಹಾಕಿ. ಸಣ್ಣ ಸಣ್ಣ ಹೆಂಟೆಗಳಿಂದ ಹೊಡೆಯುತ್ತ. ಬಯ್ಯುತ್ತ ತಲೆಯನ್ನು ತಿವಿಯುತ್ತ ಬರುತ್ತಿದ್ದರು. ರಾಜನ ಪಟ್ಟದಾನೆಯನ್ನೇರಿ ಬರುತ್ತಿದ್ದ ಕಮಠ ನನ್ನು ಕತ್ತೆಯ ಮೇಲೆ ಕುಳ್ಳಿರಿಸಿ ಹರಿದ ಮೊರಗಳನ್ನು ಎತ್ತಿಹಿಡಿದು. ತಲೆಯ ಮೇಲೆ ಬುಗುಟುಗಳು ಏಳುವಂತೆ ಒರಟಾಗಿ ತಿವಿಯುತ್ತ ಹಿಂದೆ ಹೊಗಳುತ್ತಿದ್ದವರೇ ಈಗ ತೆಗಳುತ್ತ, ಕತ್ತೆಯ ಮೇಲೆ ಕೂರಿಸಿ ತನ್ನ ವಂಶದ ಅಪಯಶಸ್ಸೆಂಬ ಕಸದ ತಿಪ್ಪೆ ಎಂದು ಸಾರುವಂತೆ ಮೆರವಣಿಗೆಯಲ್ಲಿ ಕರೆತಂದರು. ನಾದಿನಿಯನ್ನೇ ಕಟ್ಟಿಕೊಂಡು ದುರಾಚಾರಿಯಾಗಿದ್ದ ಕೇಡಿಗನು. ಈಗ ವೇಶದಿಂದ

ಹೊರಡಿಸಲ್ಪಟ್ಟವನು ಎಂದು ಜನ ಗಟ್ಟಿಯಾಗಿ ಸಾರುತ್ತ ಊರಿಂದಾಚೆಗೆ ಅಟ್ಟಿಬಿಟ್ಟರು. ಅತ್ಯಂತ ದುರಾಚಾರಿಯಾದ ಕಮಠನನ್ನು ಶಿಕ್ಷಿಸಿದುದರಿಂದ ಪುರಜನರಿಗೆಲ್ಲ ಸಂತೋಷ ವುಂಟಾಯಿತು.

ಪೌದನ ಪುರಕ್ಕೆ ಹತ್ತು ಹರಿದಾರಿ ದೂರದಲ್ಲಿದ್ದ ಭೂತಾದ್ರಿಗೆ ಅವಮಾನಿತನೂ ಮೂರ್ಖನೂ ಆದ ಕಮಠನು ಬಂದು, ನಿರಕ್ಷರ ಕುಕ್ಷಿಯೂ, ಹೆಣೆದುಕೊಂಡಿರುವ ಜಡೆಗಳ ಭಾರವನ್ನು ಹೊರುತ್ತ ಕತ್ತೆಯಂತಿರುವವನೂ ಪಾಪದಂತೆ ಕಪ್ಪಾಗಿದ್ದ ಭೌತಿಕ (ಶೈವ) ಬ್ರಹ್ಮಚಾರಿಯೊಬ್ಬನನ್ನು ಸಮೀಪಿಸಿ "ನಿನ್ನ ತಪಸ್ಸನ್ನು ನನಗೆ ಕೊಡು" ಎಂದು ಕೇಳಿದನು. ಆಗಲಿ ಎಂದು ಕಮಠನ ತಲೆಯನ್ನು ನುಣ್ಣಗೆ ಬೋಳಿಸಿ ತನ್ನ ದೀಕ್ಷೆಯನ್ನು ಕೊಡಲು, ದಂಡು ಬೂದಿ ಸೊರೆ ರುದ್ರಾಕ್ಷಗಳಿಂದ ಕೂಡಿದ ಆತನ ತಪಸ್ಸನ್ನು ಸ್ವೀಕರಿಸಿ, ದುರಾಚಾರವನ್ನೇ ಬೆರಳೆತ್ತಿ ತೋರಿಸುವಂತೆ ಕೈಯನ್ನು ಮೇಲಕ್ಕೆತ್ತಿ ಕೊಂಡು ತಪಸ್ಸು ಮಾಡತೊಡಗಿದನು. ಅಣ್ಣನ ಮೇಲಿನ ಅತಿಯಾದ ವ್ಯಾಮೋಹದಿಂದ ಅನ್ನಪಾನಾದಿ ನಿದ್ರೆಗಳನ್ನು ತೊರೆದು ಚಿಂತಿಸುತ್ತಿರುವಾಗ ದುಷ್ಟಜ್ಞಾನಿಯಾಗಿದ್ದ ಸನ್ಯಾಸಿ ಯೊಬ್ಬನು ಯಮದೂತನು ಬಂದಂತೆ ಬಂದು ನಿಮ್ಮಣ್ಣನು ಕ್ರೂರಜಂತುಗಳಿಂದ ಕೂಡಿದ ಭಯಂಕರವಾದ ಕಾಡಿನಿಂದ ಕೂಡಿದ ಭೂತಾದ್ರಿಯಲ್ಲಿ ಘೋರತಪಸ್ಸನ್ನು ಮಾಡುತ್ತಿರುವು ದನ್ನು ಕಂಡೆನೆಂದು ಹೇಳಿಹೋದನು. ಮರುಭೂತಿಯು ಈ ವಾರ್ತೆಯನ್ನು ಕೇಳಿದಕೂಡಲೇ ಅತ್ಯಾನಂದಭರಿತನಾಗಿ ಅರವಿಂದ ಮಹಾರಾಜನಲ್ಲಿಗೆ ಬಂದು ಅತ್ಯಂತ ದಯಾಳುಗಳಾದ ನೀವು ಅಂತಹ ದುರಾಚಾರಿಗೆ ಶೂದ್ರನಿಗಾಗಬೇಕಾಗಿದ್ದ ಕ್ರೂರವಾದ ಶಿಕ್ಷೆ ಯನ್ನು ಕೊಡದೆ ಸಾಮಾನ್ಯ ಶಿಕ್ಷೆಯನ್ನು ವಿಧಿಸಿ ತಮ್ಮ ಉದಾರ

ಗುಣವನ್ನು ಮರೆದಿದ್ದೀರಿ. ಈಗ ನಮ್ಮಣ್ಣನು ತನಗಾದ ಅವಮಾನದ ಬೆಂಕಿಯಿಂದ ಬೇಯುತ್ತ ಭೂತಾದ್ರಿಯಲ್ಲಿ ಘೋರ ತಪಸ್ಸಿನಲ್ಲಿರುವನೆಂಬ ಸುದ್ದಿಯನ್ನು ಮಾನವನೋರ್ವನಿಂದ ತಿಳಿದೆ. ನಾನಲ್ಲಿಗೆ ಹೋಗಿ ಅವನ ಮನೋಗ್ಲಾನಿಯನ್ನು ಉಚಿತವಾಕ್ಯಗಳಿಂದ ಪರಿಹರಿಸುವೆನು. ಅದಕ್ಕೆ ತಾವು ಅಪ್ಪಣೆ ಕೊಡಬೇಕೆಂದು ಬೇಡಿಕೊಳ್ಳುತ್ತೇನೆ ಎಂದನು. ಅರವಿಂದ ಮಹಾರಾಜನು ಮುಗುಳ್ನಗುತ್ತ—"ಮನೆಯೊಳಗಣ ಪಾವಂ ನೆಟ್ಟನೆ ಕಳೆವಂತೆ" ಅವನನ್ನು ಕಳೆದರೆ ನಿಮಗೇಕಿಷ್ಟು ದುಃಖ. ಆ ದುರ್ಜನನಿಂದ ಕೇಡಲ್ಲದೆ ಒಳಿತೇನಾದಪ್ಪುದೇ? ಅಪನೀತಿಯಿಂದ ಕೂಡಿದ ಆ ಅವಿವೇಕಿಯನ್ನು ಹುಡುಕಿಕೊಂಡು ಹೋಗುವುದು "ಮಿಟ್ಟುವನ ಜಸಿ ಪೋಪ ತೆಱನನಱಿಪ್ಪುಗುಂ ಮತಿಗೆಟ್ಟು ಅವನಿರುವ ತಾಣ" "ಅಱಿಸಿತಿಂಬ ದೈವಕ್ಕೆ ಪೋಗಿ ಪಾಳಂಬಡುವಂತೆ" ಅವನ ಮೇಲಿನ ಅತಿಮೋಹದಿಂದ ಹೋದರೆ "ಗತಿ ಕಿಡುಗುಂ ಪ್ರಾಣ ಬಾಧೆಯಕ್ಕುಮಮೋಘಂ." ನಿಮ್ಮಂತಹ ನೀತಿವಂತರೇ ಹೀಗೆ ಮಾತನಾಡಿದರೆ ಹೇಗೆ? ಆ ದುರಾತ್ಮನೆಂತುಂ ಪರಿಹರಣೀಯನಲ್ಲದೆ ಸ್ವೀಕರಣೀಯನಲ್ಲ ಎಂದು ಮರುಮಾತಿಗೆ ಅವಕಾಶ ಕೊಡದೆ ಮರುಭೂತಿಯನ್ನು ಹಿಂತಿರುಗಿ ಕಳುಹಿಸುತ್ತಾನೆ. ಆದರೇನು? "ಅತಿ ಮೋಹಂಗತಿಯುಂ ಕಿಡಿಕುಂ" ಎಂಬ ಮಾತಿನಂತೆ ಅಣ್ಣನಲ್ಲಿದ್ದ ವ್ಯಾಮೋಹಕ್ಕೊಳಗಾಗಿ ಮರುಭೂತಿಯು ಅರಮನೆಯನ್ನು ಬಿಟ್ಟು ಮಾರ್ಗವನ್ನರಸುತ್ತ ಭೂತಾದ್ರಿಗೆ ಬಂದು ತಾಪಸರೂಪವನ್ನು ಸ್ವೀಕರಿಸಿದ್ದ ಸಹೋದರನ ಬಳಿಗೆ ಬಂದು ಅವನ ಅವಸ್ಥೆಯನ್ನು ಕಂಡು ಶೋಕೋದ್ರೇಕವಾಗಿ ಮನ್ಯುಮಿಕ್ಕು ಕಮಠನನ್ನು ಕುರಿತು.—

ನೀನಿಲ್ಲದೊಡೆನಗೇವುದೊ ಭೂನಾಯಕನಿತ್ತಮಾತ್ಯಪದಂ.

ಆದರಿಂದ "ನೀನಾದುದನಪ್ಪಂ ಪೆಜಿರ್ತೇನಗ್ರಜ ನಿನ್ನದೊಂದು ಲೋಕಮೆ ಲೋಕಂ" ಎಂದು ನುಡಿದು ಅವನ ಕಾಲಿಗೆರಗಿದನು. ಆದರೇನು? ಕಟ್ಟಿತನ್ ಕಟಿಪವನಾವಂ? ಅಲ್ಲಿ ನನಗೆ ಸರಿಯಿಲ್ಲದ ಅವಮಾನವನ್ನು ರಾಜನಿಂದ ಮಾಡಿಸಿ ಮತ್ತೆ ಇಲ್ಲಿಗೂ ಬಂದು ಅವನ್ನೇ ತಿಳಿಸಿ ಪುೂದಲಿಸಲು ದುಷ್ಟನಾದ ನನ್ನ ತಮ್ಮನು ಇಲ್ಲಿಗೆ ಬಂದಿದ್ದಾನೆಂದು ತನಗೆ ಸಹಜವಾದ ರೀತಿಯಲ್ಲಿ ಭಾವಿಸಿ ಸ್ವಲ್ಪವೂ ತಾಳ್ಮೆಯನ್ನು ತಂದುಕೊಳ್ಳದೆ, ತಪಸ್ಸು ಮಾಡುವಾಗ ತಾನು ಹೊತ್ತುಕೊಂಡಿದ್ದ ಕಲ್ಲನ್ನು ಕಮಠನು ಕಾಲಿಗೆ ಬಿದ್ದಿದ್ದ ಮರುಭೂತಿಯ ಮೇಲೆ ಎತ್ತಿಹಾಕಿದನು. "ಪೊಡೆವಡಲ್ ಪೋಗೆ ವೇಗುಲಂ ಮೇಲ್ಕೆಡೆದುದು" ಎಂಬ ನಾಣ್ನುಡಿಯಂತೆ ಕಲ್ಲಿನ ಪೆಟ್ಟಿನಿಂದ ಮರುಭೂತಿಯ ತಲೆ, ಸಿಡಿಲಿನಿಂದ ಬೆಟ್ಟದ ಶಿಖರ ಒಡೆವಂತೆ. ಒಡೆದು ನುಚ್ಚುನೂರಾಯಿತು. ಆತ್ಮಧ್ಯಾನಾಧೀನ ಮಾನಸನಾಗಿ ಪ್ರಾಣಪರಿತ್ಯಾಗ ಮಾಡಿದುದರಿಂದ ಮರು ಭೂತಿಯು ಮಲಯದೇಶದ ಕುಂಜರಶೈಲ ಮತ್ತು ವೇದಾವತೀ ನದಿಯ ಮಧ್ಯದಲ್ಲಿದ್ದ ಸಲ್ಲಕೀವನದಲ್ಲಿ ಬಬ್ಬರಿ ಮತ್ತು ಪೃಥ್ವಿ ಘೋಷವೆಂಬ ಗಜದಂಪತಿಗಳಿಗೆ ವಜ್ರಘೋಷನೆಂಬ ಆನೆಯಾಗಿ ಹುಟ್ಟಿದನು. ಇತ್ತ ಕಮಠನ ಅನುಚರರಾದ ತಾಪಸರೆಲ್ಲರೂ ಈ ಅಘರೂಪನ ನಿಸ್ತ್ರಿಂಶವೃತ್ತಿಯಂ ಕಂಡು, ಅನುಜಂಗಾಪತ್ತಂ ಮಾಡುವಂ ಕೋಪಿಸಿದೊಡೆ ನಮಗಮೀ ಖಳಂ ಮಾಡು ಮುದೇಂ ಎಂದು ಭಾವಿಸಿ. "ದುರ್ಜನರು ಬೆಂಕಿಯಂತೆ ತನ್ನನ್ನು ಆಶ್ರಯಿಸಿದವರನ್ನೇ ಕೊಲ್ಲುವರು" (ಅಗ್ನಿವತ್ಸ್ವಾಶ್ರಯಮೇವ ದಹಂತಿ ದುರ್ಜನಾ) ಎಂಬುದನ್ನು ಪರ್ಯಾಲೋಚಿಸಿ ಕಮಠ ನನ್ನು ತ್ಯಜಿಸಿ ಬೇರೆಡೆಗೆ ಹೊರಟುಹೋಗುತ್ತಾರೆ. ಗೆಳೆಯರಿಂದ ಪರಿತ್ಯಕ್ತನಾದ ಕಮಠನು ಬೇಡರ ಪಡೆಯನ್ನು ಸೇರಿಕೊಂಡು

'ಬೇವಿನಮರನಂ ಕೈಪೆಸೊರೆ ಪ್ರೋದ್ದುರ್ವಂತೆ' ನೀಚಾಚಾರಗಳಲ್ಲಿ ತೊಡಗಿ, ಊರೊಂದನ್ನು ಕೊಳ್ಳೆಹೊಡೆಯುವಾಗ ಹರಿತವಾದ ಅಂಬಿನೇಟಿನಿಂದ ಗಾಯಗೊಂಡು ಸತ್ತು ಅದೇ ಕಾಡಿನಲ್ಲಿ ವಿಷ ಪೂರಿತವಾದ ಕುಕ್ಕುಟೋರಗನಾಗಿ ಹುಟ್ಟುತ್ತಾನೆ.

ಇತ್ತ ವಜ್ರವೀರನನ್ನು ಗೆದ್ದು, ಅಷ್ಟಶೋಭೆಯಿಂದ ಕೂಡಿ. ದೇವಕಾಂತೆಯರನ್ನೂ ಪರಿಹಾಸಮಾಡುವಂತಿದ್ದ ರೂಪವತಿಯ ರಾದ ಅಂತಃಪುರ ಸ್ತ್ರೀಯರೊಂದಿಗೆ, ಇಂದ್ರವೈಭವವನ್ನೂ ಹೀಯಾಳಿಸುವ ಏಳು ಅಂತಸ್ತಿನ ಉಪ್ಪರಿಗೆಯ ಬಿಸಿಲು ಮಹಡಿಯ ಮೇಲೆ ಕುಳಿತು ಶರತ್ಕಾಲದ ಮೋಡಗಳು ಬರೆದ ದೇವಾಲಯದ ಚಿತ್ರದ ವೈಚಿತ್ರ್ಯವನ್ನು ಕಂಡು ಸೋಜಿಗ ಪಟ್ಟ ರಾಜನ ಮನಸ್ಸಿನಲ್ಲಿ ಅದರ ಚಿತ್ರ ಮೂಡುತ್ತಿದ್ದಂತೆಯೇ ಕರಗಿ ಹೋದ ಮೋಡವನ್ನು ಕಂಡು ತೀವ್ರವೈರಾಗ್ಯ ಉಂಟಾಗುತ್ತದೆ. ಅದೇ ವೇಳೆಗೆ ತನ್ನ ರಾಜಧಾನಿಯ ಬಳಿ ಬಂದಿದ್ದ ಸ್ವಯಂಪ್ರಭಾ ಮುನಿಗಳಿಂದ ಮರುಭೂತಿಯ ವೃತ್ತಾಂತವನ್ನು ಕೇಳಿ. ಇಮ್ಮಡಿ ವೈರಾಗ್ಯದಿಂದ ಅವರಿಂದಲೇ ದೀಕ್ಷೆಯನ್ನು ಪಡೆದು. ಚತುರಾ ರಾಧನೆಯಲ್ಲಿದ್ದು ಅವಧಿಜ್ಞಾನವನ್ನು ಪಡೆಯುತ್ತಾನೆ. ನಂತರ ತೀರ್ಥಕ್ಷೇತ್ರಗಳನ್ನೆಲ್ಲ ಸುತ್ತಿಕೊಂಡು ಸಮ್ಮೇದಗಿರಿಯಿಂದ ಮುಂದೆ ಬರುವಾಗ ತಂತ್ರಗುಪ್ತ-ಚಂದ್ರಗುಪ್ತರೆಂಬ ವ್ಯಾಪಾರಿ ಗಳನ್ನು ಅವರ ಪರಿಜನರೊಂದಿಗೆ ಸಂಧಿಸಿ ವೇದಾವತೀನದಿಯ ತೀರದಲ್ಲಿಯೇ ಬೀಡುಬಿಟ್ಟಿದ್ದು ಅವರಿಗೆ ಅವರ ಬಯಕೆಯಂತೆ. ಮುಂದೆ ವಜ್ರಘೋಷವೆಂಬ ಮದಗಜಕ್ಕೆ ಮಾಡಲಿರುವ ಉಪ ದೇಶಕ್ಕೆ ಮುನ್ನುಡಿಯೋ ಎಂಬಂತೆ ಉಪದೇಶ ಮಾಡಲುದ್ಯುಕ್ತ ನಾಗುತ್ತಾನೆ. ಆ ಸಮಯದಲ್ಲಿ ಮದೋದ್ಧತನಾದ ವಜ್ರಘೋಷ ನೆಂಬ ಆನೆಯು ಕಾಡಿಗೆ ತಾನೇ ತಾನೆಂಬಂತೆ ಎದುರಿಗೆ ಸಿಕ್ಕಿದ

ಕಾಡುಪ್ರಾಣಿಗಳನ್ನೆಲ್ಲ ಸಿಗಿದು ಚೆಲ್ಲುತ್ತ ಯಮಧರ್ಮನಂತೆ ಬರುತ್ತಿರಲು, ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದರೂ ದೃಢವಾಗಿ ನಿಂತಿದ್ದ ಅರವಿಂದ ಋಷಿಯ ಬಳಿಗೆ ಸೀಳಬೇಕೆಂದು ಬಂದ ಆನೆ ಜಾತಿಸ್ಮರನಾಗಿ ಬೆದರಿ ಹಿಮ್ಮೆಟ್ಟಿ ನಿಂತಿತು. ಅದನ್ನು ಕಂಡ ವರ್ತಕರ ಬೇಡಿಕೆಯಂತೆ ಅರವಿಂದ ಮುನಿಗಳು ಅದರ ವೃತ್ತಾಂತವನ್ನು ಹೇಳಿ, ವಜ್ರಘೋಷನ ಮನಸ್ಸಿನಲ್ಲುಂಟಾಗುತ್ತಿರುವ ಚಿತ್ತಗ್ಲಾನಿಯನ್ನು ತನ್ನ ಅವಧಿಜ್ಞಾನದಿಂದ ತಿಳಿದು ಅದರ ಸಂಶಯವನ್ನು ಅರ್ಥಮಾಡಿಕೊಂಡು, ಜಿನಧರ್ಮದ ನಿರ್ಮಲ ಸ್ವರೂಪವನ್ನು, ರತ್ನತ್ರಯದ ಸಿದ್ಧಿ ಮಾರ್ಗವನ್ನು ಅರ್ಥವಾಗುವಂತೆ ಬೋಧಿಸುತ್ತಾನೆ. ಅನಂತರ ಕಮಠ, ಮರುಭೂತಿಯರ ಭವಾವಳಿಯನ್ನು ಸಂಗ್ರಹವಾಗಿ ತಿಳಿಸುತ್ತಾನೆ. ದುರಾಚಾರಿಯಾದ ಕಮಠನು ಕುಕ್ಕುಟಸರ್ಪ, ಬಳಿಕ ಭಯಂಕರವಾದ ಧೂಮಪ್ರಭೆಯೆಂಬ ಐದನೆಯ ನರಕವಲ್ಲಿ ನಾರಕಿ, ಹಾಗೆಯೇ ಕ್ರಮವಾಗಿ ಹಿಮಪರ್ವತದಲ್ಲಿ ಹೆಬ್ಬಾವು, ಆರನೆಯ ನರಕದಲ್ಲಿ ನಾರಕಿ, ಬಳಿಕ ವ್ಯಾಧ, ಅಪಾರವಾದ ದುಃಖಸಮುದ್ರವುಳ್ಳ ತಮಃಪ್ರಭಾ ಭೂಮಿಯಲ್ಲಿ ನಾರಕಿ, ಬಳಿಕ ಸಿಂಹ, ಆರನೆಯ ನರಕದ ನಾರಕಿ, ತೀವ್ರವಾದ ತಪಸ್ಸುಳ್ಳವನು, ಕೊನೆಯದಾಗಿ ಭೂತಾನಂದನೆಂಬ ಅಸುರ ಹೀಗೆ ಜನ್ಮಗಳನ್ನೆತ್ತಿ ಅನಂತವಾದ ದುಃಖಕ್ಕೆ ಗುರಿಯಾಗುವನು. ಆತನು ನಿನಗೆ ಜನ್ಮಾಂತರಗಳಲ್ಲಿ ಉಂಟುಮಾಡುವ ತೊಂದರೆಗಳು ಚಿನ್ನಕ್ಕೆ ಬೆಂಕಿಯ ಸಂಪರ್ಕವನ್ನುಂಟುಮಾಡಿದಂತೆ ಒಳ್ಳೆಯದೇ ಆಗುತ್ತದೆ. ನೀನು ಮೊದಲು ಸತ್ಕುಲ ಪ್ರಸೂತನಾದ ಮರುಭೂತಿ, ಈಗ ಭದ್ರಲಕ್ಷಣನಾದ ಉತ್ತಮಜಾತಿಯ ಆನೆ. ಮುಂದೆ ಕ್ರಮವಾಗಿ ಸಹಸ್ರಾರ ಕಲ್ಪದ ದೇವ (ಶಶಿಪ್ರಭದೇವ), ಬಳಿಕ ಖೇಚರ, ಅಚ್ಯುತ ಕಲ್ಪದ ದೇವ, ಪುತ್ತೆ

ರಾಜ. ಗ್ರೈವೇಯಕ ಕಲ್ಪದ ದೇವ. ಬಳಿಕ ಆನಂದನೆಂಬ ರಾಜ–ಆನತಕಲ್ಪದದೇವ. ಕೊನೆಗೆ ಸುರನರೋರಗ ವಂದ್ಯನಾದ ಪಾರ್ಶ್ವನಾಥನೆಂಬ ತೀರ್ಥಂಕರನಾಗಿ ಹುಟ್ಟಿ ಮೋಕ್ಷವನ್ನು ಪಡೆಯುವೆ ಎಂದು ತಿಳಿಸಿ. ಮುನೀಶ್ವರರು ಉತ್ತಮವಾದ ಶ್ರಾವಕ ವ್ರತಗಳನ್ನು ಆ ಆನೆಗೆ ಸಮ್ಯಕ್ತ್ವಪೂರ್ವಕವಾಗಿ ಕೊಟ್ಟು. ತಾವು ಕೈಕೊಂಡಿದ್ದ ಪುಣ್ಯಸಾಧಕವಾದ ತೀರ್ಥವಂದನೆಗೆ ಹೊರಡುತ್ತಾರೆ. ಇತ್ತ ಆನೆಯೂ ಅಹಿಂಸಾವ್ರತವನ್ನು ಪಾಲಿಸುತ್ತ ಎಂದಿನಂತೆ ಇತರ ಆನೆಗಳು ನೀರು ಕುಡಿದು ಹಿಂತಿರುಗಿದ ದಾರಿಯಲ್ಲಿಯೇ ಹೋಗಿ ವೇದಾವತೀ ನದಿಯ ತೀರದಲ್ಲಿದ್ದ ಆನೆಗಂಪಲಿಗೆ ಇಳಿದು ಮುಳುಗಿಕೊಂಡಿರಲು ಹಿಂದೆ ಕಮಠನಾಗಿದ್ದ ಕುಕ್ಕುಟ ಸರ್ಪ ಅತ್ಯಂತ ಕೋಪದಿಂದ ಬಂದು ಸಿಂಹದಂತೆ ಆನೆಯ ನೆತ್ತಿಯಮೇಲೆ ಹಾರಿ ಹಿಡಿದು ಕಚ್ಚಲು ಅದರ ಕ್ರೂರವಾದ ವಿಷವು ದೇಹವನ್ನೆಲ್ಲಾ ವ್ಯಾಪಿಸಿದ್ದರಿಂದ ಆನೆ ಕಳೆಯಲಸಾಧ್ಯವಾದ ಪಾಪವೆಂಬ ಕೊಳೆಯನ್ನು ತೊಳೆದುಕೊಳ್ಳಲು ದೊಡ್ಡ ಸಹಾಯವಾಯಿತೆಂದು ಭಾವಿಸಿ ಶಾಂತಭಾವದಿಂದ ಪಂಚಪರಮೇಷ್ಠಿಗಳ ಪಾದಗಳನ್ನು ಧ್ಯಾನಿಸಿ "ಪ್ರಾಣಿಗಳು ತಮ್ಮನ್ನು ತಾವೇ ಮೇಲೆತ್ತಿಕೊಳ್ಳಬೇಕು" ಎಂಬ ಮಾತನ್ನು ನಿಶ್ಚಯ ಮಾಡಿ ಜಿನೇಶ್ವರ ಭಕ್ತಿ ಇದ್ದುದರಿಂದ ಸ್ವರ್ಗಪ್ರಾಪ್ತಿಯಾಗಿ ಶಶಿಪ್ರಭದೇವನಾಗಿ ಜನಿಸುತ್ತದೆ. ಇಲ್ಲಿ ಆ ಸ್ವರ್ಗಲೋಕದ ಹಾಗೂ ಅವನ ಪರಿವಾರದ ಭವ್ಯವರ್ಣನೆ ಕಂಡುಬರುತ್ತದೆ.

ಸ್ವರ್ಗಾಧಿಪತಿಯಾದ ಶಶಿಪ್ರಭದೇವನು ಊಣೆಯವಿಲ್ಲದ ಸ್ವರ್ಗಸುಖವನ್ನನುಭವಿಸುತ್ತಿರಲು ಒಂದುದಿನ ಇದ್ದಕ್ಕಿದ್ದಂತೆ ಅವನು ಧರಿಸಿದ್ದ ಹೂಮಾಲೆಗಳು ಬಾಡುತ್ತವೆ. ಉಟ್ಟಿದ್ದ ವಸ್ತ್ರಗಳು ಮಲಿನವಾಗುತ್ತವೆ. ರತ್ನಖಚಿತವಾದ ಅರಮನೆ ಅಲ್ಲಾಡು

ತ್ತದೆ. ಈ ಕೆಟ್ಟ ಚಿಹ್ನೆಗಳು ಮುಗಿಯುತ್ತಿರುವ ಆಯುಸ್ಸನ್ನು ಸೂಚಿಸುತ್ತಿರುವುದೆಂದು ಬಗೆದು. ಷಣ್ಮಾಸಗಳು ಮಾತ್ರವೆಂದು ತನ್ನ ಅವಧಿಜ್ಞಾನದಿಂದ ತಿಳಿದು. ಆರು ತಿಂಗಳು ಸತತವಾಗಿ ಧರ್ಮಧ್ಯಾನಪರನಾಗಿ 'ಯದ್ಧ್ಯಾವಂ ತದ್ಭವತಿ' ಎಂಬ ನುಡಿಯಂತೆ ಜಿನಪತಿಪಾದವನ್ನು ಧ್ಯಾನಿಸುತ್ತ. ಸಮಾಧಿ ಮರಣವನ್ನು ಸಾಧಿಸಿ ಬೇಚರಪ್ರಭು ವಿದ್ಯುತ್ಪ್ರಭ ಮತ್ತು ಆತನ ಪತ್ನಿ ವಿದ್ಯುನ್ಮಾಲಿಯರಿಗೆ ರಶ್ಮಿವೇಗನೆಂಬ ಮಗನಾಗಿ ಹುಟ್ಟಿ. ಯೌವ್ವನವನ್ನು ಪಡೆದಾಗ ತಂದೆ ಮಗನಿಗೆಂದು ಹೆಣ್ಣನ್ನು ಹುಡುಕಿಸುವ ಸಂಭ್ರಮವನ್ನು ಕಂಡು. ಬಂಧಿಸುವ ಮದುವೆ ಬೇಡೆಂದು ತಂದೆಗೆ ಜೀವದ ಕ್ಷಣಭಂಗುರತೆಯನ್ನು ತಿಳಿಸಿ. ಜಾತಿಸ್ಮರೆಯಾಗಿ ಆ ವಯಸ್ಸಿನಲ್ಲಿ ವೈರಾಗ್ಯವನ್ನು ತಾಳಿ. ಸಮಾಧಿಗುಪ್ತರಲ್ಲಿ ದಿಗಂಬರ ದೀಕ್ಷೆಯನ್ನು ಪಡೆದು. ಹಿಮವತ್ಪರ್ವತದ ಗುಹಾಂತರ್ಯದಲ್ಲಿ ಏಕ ವಿಹಾರಿಯಾಗಿ ಘೋರವಾದ ತಪಸ್ಸು ಮಾಡುತ್ತಿರುತ್ತಾನೆ. ಇತ್ತ ದುರಾಚಾರದಲ್ಲಿ ತೊಡಗಿದ್ದ ಕುಕ್ಕುಟೋರಗ ಸತ್ತು ಮಿತಿಯಿಲ್ಲದ ದುಃಖಿಗಳಿಗೆ ಆವಾಸಸ್ಥಾನವಾದ ಧೂಮಪ್ರಭೆಯೆಂಬ ಐದನೆಯ ನರಕದಲ್ಲಿ ಹುಟ್ಟಿ (ಇಲ್ಲಿ ನರಕದ ಭಯಂಕರ ವರ್ಣನೆ ವಿಸ್ತಾರವಾಗಿದೆ). ನವೆದು ಮತ್ತೆ ಗುಹೆಯಂತೆ ಬಾಯುಳ್ಳ ಆರು ಯೋಜನ ಉದ್ದವಾದ ಹೆಬ್ಬಾವಾಗಿ ಹುಟ್ಟಿ. ಆ ಪರ್ವತದಲ್ಲಿ ಓಡಾಡುತ್ತ. ಪೂರ್ವಜನ್ಮವೈರಕಾರಣವಾಗಿ ತಪಸ್ಸಿನಲ್ಲಿದ್ದ ರಶ್ಮಿವೇಗನನ್ನು ಹಾಗೆಯೇ ಅನಾಮತ್ತಾಗಿ ನುಂಗಿಬಿಡುತ್ತದೆ. ಆದರೆ ನಿಶ್ಚಲ ತಪಸ್ಸಿನಲ್ಲಿದ್ದ ಮುನಿ ಬಿಡಿಸಿಕೊಳ್ಳಲು ಪ್ರಯತ್ನಿಸದೆ ಉಪಸರ್ಗವನ್ನು ಸಹಿಸಿ ನಶ್ವರ ಶರೀರವನ್ನು ಬಿಟ್ಟು ಅಚ್ಯುತವೆಂಬ ಹದಿನಾರನೆಯ ಸ್ವರ್ಗದಲ್ಲಿ ಅಚ್ಯುತೇಂದ್ರನಾಗಿ ಹುಟ್ಟುತ್ತಾನೆ. (ಇಲ್ಲಿ ಮತ್ತೆ ಸ್ವರ್ಗ ಸುಖ. ಪರ್ವತ. ನರಕಗಳ ವರ್ಣನೆ

ವಿಸ್ತಾರವಾಗಿ ಬಂದಿದೆ). ಏಳನೆಯ ಆಶ್ವಾಸ ಪೂರ್ಣವಾಗಿ ಅಷ್ಟಾದಶವರ್ಣನೆಗಳಿಂದ ಇಡಿಕಿರಿದಿದೆ. ಅಚ್ಯುತೇಂದ್ರನಾಗಿ ಹುಟ್ಟಿದಮೇಲೆ ಅಲ್ಲಿನ ಸ್ವರ್ಗಸುಖವನ್ನನುಭವಿಸುತ್ತಿರುವಂತೆಯೆ ಒಂದು ದಿನ ತನಗಿನ್ನು ಆರುತಿಂಗಳ ಆಯುಸ್ಸೆಂದು ತಿಳಿದು ಅಶ್ವ ಪುರದರಸು ವಜ್ರವೀರ್ಯ ಮತ್ತು ಪತ್ನಿ ವಿಜಯೆ ಇವರಿಗೆ ವಜ್ರನಾಭಿ ಎಂಬ ಮಗನಾಗಿ ಜನಿಸುತ್ತಾನೆ.

ವಜ್ರನಾಭಿಯು ಪ್ರಾಪ್ತವಯಸ್ಕನಾಗುತ್ತಿದ್ದಂತೆಯೇ ಆಯುಧಾಗಾರದಲ್ಲಿ ಚಕ್ರರತ್ನವು ಹುಟ್ಟುತ್ತದೆ. ಇದರಿಂದ ದಿಗ್ವಿಜಯಯಾತ್ರೆಯನ್ನು ಕೈಕೊಳ್ಳಬೇಕೆಂಬ ಸೂಚನೆಯು ದೊರೆತು, ತಾನು ೧೪ ರತ್ನಗಳನ್ನು ಪೂಜಿಸಿ ಆನೆ, ಕುದುರೆ ಮುಂತಾದ ಅಪಾರವಾದ ಷಡಂಗ ಸೇನಾ ಸಮೇತನಾಗಿ ಶುಭಮುಹೂರ್ತದಲ್ಲಿ ದಿಗ್ವಿಜಯ ಯಾತ್ರೆಯನ್ನು ಕೈಕೊಳ್ಳುತ್ತಾನೆ. ಇಲ್ಲಿಂದ ಮುಂದೆ ೮, ೯, ೧೦, ೧೧ನೇ ಆಶ್ವಾಸಗಳ ತುಂಬ ದಿಗ್ವಿಜಯ ಯಾತ್ರೆಯ ವರ್ಣನೆ ಮಾಡುತ್ತಲೇ ಷಡ್ ಋತುಗಳು, ಬೀಡುಬಿಟ್ಟು ರಕ್ತಾನದಿ, ವನ, ಪರ್ವತ, ಭೋಜನಶಾಲೆ, ವಿಧ ಭಕ್ಷ್ಯಗಳು, ರಾಣಿವಾಸ, ಸ್ತ್ರೀಯರ ಸಲ್ಲಾಪ, ಜಲಕೇಳೀ ವರ್ಣನೆ, ಶೃಂಗಾರ ಲೀಲೆ ಮುಂತಾದವುಗಳ ರಸಮಯ ವರ್ಣನೆ, ಸಾಮಂತರ ಶರಣಾಗತಿ, ಕಪ್ಪ ಕಾಣಿಕೆಗಳನ್ನು ಸಲ್ಲಿಸುವುದು, ಭಯಂಕರವಾದ ಬೇಸಗೆಯಿಂದಾದ ಉತ್ತಾಪ, ಆದರೂ ತನಗೆ ತನ್ನ ಸೇನೆಗೆ ಮಾತ್ರ ಅದು ತಟ್ಟದಿರುವುದು ಮುಂತಾದ ವರ್ಣನೆಗಳು ತುಂಬಿಹೋಗಿವೆ. ಕೊನೆಗೆ ಮ್ಲೇಚ್ಛ ಖಂಡದ ಚೀಲಾತಾವರ್ತಕರನ್ನು ಬಗ್ಗಿಸಿ, ನಿಷಧಾಮರರನ್ನು ಬಾಯ್ಮುಚ್ಚಿಸಿ ಕಪ್ಪ-ಕಾಣಿಕೆಗಳನ್ನು ಸ್ವೀಕರಿಸಿ ವೃಷಭಾಚಲ ಪರ್ವತದ ಬಳಿ ಬಂದು ತನ್ನ ದಿಗ್ವಿಜಯ ಸೂಚಕವಾದ ಬಿರುದುಗಳನ್ನು ಕೆತ್ತಿಸಬಯಸುತ್ತಾನೆ. ಆದರೆ ಜಾಗವೇ ಇಲ್ಲದುದರಿಂದ

ಹಿಂದಿನ ರಾಜರ ಹೆಸರುಗಳನ್ನು ಅಳಿಸಿ ತನ್ನ ಹೆಸರನ್ನು ಕೆತ್ತಿಸಿ ರಾಜ್ಯಕ್ಕೆ ಹಿಂತಿರುಗಿ ಬಂದು ಪಟ್ಟಾಭಿಷಿಕ್ತನಾಗುತ್ತಾನೆ. ರಾಜರು ಸಾಮಂತರು ರಾಣಿವಾಸದವರು ಮುಂತಾದವರಿಂದ ತುಂಬಿದ್ದ ಸಭೆಯಲ್ಲಿ ಓಲಗಗೊಟ್ಟು ನೀಲಾಂಜನೆಯ ನೃತ್ಯವನ್ನು ನೆನಪಿಗೆ ತರುವ ನೃತ್ಯವನ್ನು ನೋಡುತ್ತಿರುವಾಗ ಕ್ಷೇಮಂಕರ ಮುನಿಗಳ ಆಗಮನ ವಾರ್ತೆಯನ್ನು ಕೇಳಿದ ತಕ್ಷಣ ಸಭೆಯನ್ನು ವಿಸರ್ಜಿಸಿ ಏಳು ಹೆಜ್ಜೆ ಮುಂದೆ ಬಂದು ಮತ್ತೆ ಹಿಂದೆ ಸರಿಯುತ್ತಾನೆ. ಮನಸ್ಸಿನಲ್ಲಿ ಶಾಂತಿ ಹುಟ್ಟಲು ವೈರಾಗ್ಯದತ್ತ ಮನಸ್ಸು ಸೆಳೆಯುತ್ತದೆ. ಸಂಸಾರದ ಅನಿತ್ಯತೆ, ಅದರಿಂದುಟಾಗುವ ಪಾಪಗಳನ್ನು ನೆನೆದು, ಶಾಶ್ವತ ಸುಖದತ್ತ ಮನಸ್ಸನ್ನು ಕೊಟ್ಟು, ಕಾಲಲಬ್ಧಿಯಿಂದ ವೈರಾಗ್ಯವನ್ನು ಹೊಂದಿ, ಉದಾರನಾದ ತನ್ನ ಮಗನಿಗೆ ರಾಜ್ಯದ ಪಟ್ಟವನ್ನು ಕಟ್ಟಿ ಮುನಿಗಳ ಪಕ್ಕದಲ್ಲಿ ದೀಕ್ಷೆಯನ್ನು ಕೈಕೊಳ್ಳುತ್ತಾನೆ. ಆಗ ಇತರ ರಾಜರು, ಸಾಮಂತರುಗಳೆಲ್ಲ ತಮ್ಮ ರಾಜನನ್ನು ಅನುಸರಿಸುತ್ತಾರೆ. ರಾಜನು ಅನೇಕ ರೀತಿಯ ತಪಸ್ಸುಗಳನ್ನು ಮಾಡಿ ಕರ್ಮಜಾಲವನ್ನು ಜಯಿಸಿ ಕೊನೆಗೆ ಆತ್ಮಧ್ಯಾನಕ್ಕೆ ತಕ್ಕ ನಿರ್ಜಂತುಕ ಸ್ಥಾನವನ್ನು ಅರಸುತ್ತ ಬಂದು ವಿಪುಳಾಚಲದ ದೊಡ್ಡ ಬಂಡೆಯಮೇಲೆ ವಜ್ರನಾಭಿ ಮುನಿಯು ನಿಶ್ಚಲ ಪ್ರತಿಮಾಯೋಗದಲ್ಲಿ ನಿಂತಿರಲು, ಹಿಂದಿನ ಜನ್ಮದಲ್ಲಿ ಹೆಬ್ಬಾವಾಗಿದ್ದಾಗ ಮುನಿಯನ್ನು ನುಂಗಿದ್ದ ಕಮಠಜೀವ ಸಿಡಿಲ ಹೊಡೆತದಿಂದ ಸತ್ತು ಕುರಂಗ ಬೇಡನಾಗಿ ಹುಟ್ಟಿದ್ದು, ಅಲ್ಲಿ ಬಂದಾಗ ಪೂರ್ವ ವೈರ ಕಾರಣವಾಗಿ ಬಾಣ ಪ್ರಯೋಗ ಮಾಡಿ ಯತಿಯನ್ನು ಕೊಂದುದಲ್ಲದೆ ಆತನ ಶರೀರವನ್ನು ತನ್ನ ಕೈಯಲ್ಲಿದ್ದ ಚಕ್ರಾಯುಧದಿಂದ ತುಂಡು ತುಂಡಾಗಿ ಕತ್ತರಿಸುತ್ತಿದ್ದರೂ ಆತ್ಮವನ್ನು ದೇಹದಿಂದ ಬೇರೆಂದು ಭಾವಿಸಿದ್ದ ಮುನಿ

ಮನಸ್ಸಿನ ವಿಕಾರಕ್ಕೆ ಸ್ವಲ್ಪವೂ ಅವಕಾಶಕೊಡದೆ 'ಶಲ್ಯವನ್ನು ಬಿಟ್ಟವನು ಯತಿ' (ನಿಶ್ಶಲ್ಯೋಯತಿಃ) ಎಂಬ ಮಾತನ್ನು ಸತ್ಯ ಮಾಡುತ್ತಾನೆ. ಅಲ್ಲಿಂದ ದೇಹವನ್ನು ವಿಸರ್ಜಿಸಿದ ಮುನಿಯು ಸುಖಕ್ಕೆ ನಿಧಿಯಂತಿರುವ ಸುಭದ್ರವೆಂಬ ಮಧ್ಯಮ ಗ್ರೈವೇಯಕ ವಿಮಾನಕ್ಕೆ ಒಡೆಯನಾಗಿ ಹುಟ್ಟಿ ಗ್ರೈವೇಯಕ ಸ್ವರ್ಗ ದಲ್ಲಿ ಅಹಮಿಂದ್ರನಾಗಿ ಅಲ್ಲಿನ ಸುಖಾಮೃತ ಪಾನಮಾಡಿ ಕೊನೆ ಯಲ್ಲಿ ಅನಂತ ಜ್ಞಾನಸಂಪನ್ನನಾದ ಜಿನೇಶ್ವರನನ್ನು ಧ್ಯಾನಿಸು ತ್ತಿದ್ದು ಮರಣ ಹೊಂದಿ ಸುಕೌಶಲ ದೇಶದ ವಜ್ರಬಾಹುರಾಜನಿಗೂ ಪ್ರಭಂಕರೀ ದೇವಿಗೂ ಆನಂದನೆಂಬ ಮಗನಾಗಿ ಜನಿಸುತ್ತಾನೆ.

ಮಹಾ ಮಂಡಲೇಶ್ವರನಾದ ಆನಂದ ರಾಜನು ಅತ್ಯಂತ ಪ್ರೀತಿವೈಭವಗಳಿಂದ ನಂದೀಶ್ವರ ಜಿನ ಪೂಜೆಯನ್ನು ಮಾಡುತ್ತಾನೆ. ಇಂದ್ರನು ಮುಂದೆ ತನಗೆ ಮಾಡಲಿರುವ ಸಮವಸರಣದ ರಚನೆ ಯನ್ನು ನೆನಪಿಗೆ ತರುವಂತೆ ಮಾಡುತ್ತಿದ್ದ ನಂದೀಶ್ವರ ಪೂಜೆ ಯನ್ನು ನೋಡಬೇಕೆಂದು ಬಂದ ವಿಪುಳಮತಿಗಳೆಂಬ ಮುನಿಶ್ರೇಷ್ಠ ರಿಗೆ ವಂದಿಸಿ, ಪೂಜಿಸಿ. ಅಚೇತನವಾಗಿರುವ ಜಿನಬಿಂಬವು ತನ್ನನ್ನು ಪೂಜಿಸುವ ಜನರಿಗೆ ನಿಗ್ರಹಾನುಗ್ರಹಕ್ಕೆ ಹೇಗೆ ತಕ್ಕುದಾಗುವುದು ಎಂದು ಕೇಳುತ್ತಾನೆ. ಆಗ ಅವರು 'ಜಿನಭಕ್ತನಿಗೆ ಆಶ್ಚರ್ಯ ವೆಂಬುದೇ ಇಲ್ಲ' (ಜೈನಸ್ಯ ವಿಸ್ಮಯೋ ನಾಸ್ತಿ) ಎಂದು ಜೈನ ಧರ್ಮದ ವಿಶೇಷತೆಯನ್ನು ಹೇಳಿ. ಅಕೃತಕ ಚೈತ್ಯಾಲಯಗಳ ಅಪಾರ ಸಂಖ್ಯೆಯನ್ನು ತಿಳಿಸಿ ಹೋಗುತ್ತಾರೆ. ಆನಂದನು ಅಂಥ ಅನೇಕ ಚೈತ್ಯಾಲಯಗಳನ್ನು ನಿರ್ಮಿಸಿ ಜಿನಭಕ್ತಿಯನ್ನು ಮೆರೆಯು ತ್ತಾನೆ. 'ಧರ್ಮಾರ್ಥಕಾಮಗಳು ಫಲವಾದ ರಾಜ್ಯಕ್ಕೆ ನಮಃ' (ಧರ್ಮಾರ್ಥಕಾಮ ಫಲಾಯ ರಾಜ್ಯಾಯ ನಮಃ) ಎಂಬ ಮಾತನ್ನು ನಿಜವಾಗಿಸುತ್ತ ಧರ್ಮದಿಂದ ರಾಜ್ಯಾಡಳಿತ ನಡೆಸಿದ

ರಾಜನಿಗೆ ರನ್ನಗನ್ನಡಿಯಲ್ಲಿ ನೋಡಿದಾಗ ಕೆನ್ನೆಯಲ್ಲಿ ನರೆಯು ಕಂಡಕೂಡಲೇ ವೈರಾಗ್ಯವುಂಟಾಗಿ, ವಜ್ರಬಾಹುವೆಂಬ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು. ಸಮುದ್ರಗುಪ್ತ ಮುನಿಶ್ರೇಷ್ಠರ ಬಳಿ ೫೦೦ ರಾಜರೊಂದಿಗೆ ದಿಗಂಬರ ಮುನಿ ದೀಕ್ಷೆಯನ್ನು ಕೈಕೊಂಡು, ಘೋರವಾದ ಹನ್ನೆರಡು ವಿಧ ತಪಸ್ಸನ್ನಾಚರಿಸಿ ತೀರ್ಥಂಕರ ಪುಣ್ಯವನ್ನು ಸಂಪಾದಿಸಿಕೊಂಡು, ಕ್ಷೀರತನವೆಂಬ ಅರಣ್ಯದಲ್ಲಿ ಪ್ರತಿಮಾಯೋಗದಲ್ಲಿ ನಿಂತಿರಲು, ಹಿಂದಿನ ಜನ್ಮದ ಕುರಂಗನು ಸತ್ತು ಸಿಂಹಜನ್ಮವನ್ನು ಪಡೆದು ಆ ಕಾಡಿನಲ್ಲಿ ತನ್ನ ಹಸಿವು ನೀಗಲು ಅನ್ಯಪ್ರಾಣಿಗಳು ದೊರೆಯದಿರಲು ಪ್ರತಿಮಾಯೋಗದಲ್ಲಿ ನಿಂತಿದ್ದ ಆನಂದ ಮುನಿಯನ್ನು ಕಂಡು, ಪೂರ್ವಜನ್ಮ ವೈರಕಾರಣದಿಂದ ಅಪಾರಕೋಪ ತುಂಬಿ ಮೇಲೆ ಬಿದ್ದು ಋಷಿಯ ಶರೀರವನ್ನು ತುಂಡು ತುಂಡಾಗಿ ಕತ್ತರಿಸಿ ತಿಂದುಹಾಕಿತು. ದೇಹವನ್ನು ಬಿಡಬೇಕೆಂದೇ ತಪಸ್ಸುಮಾಡುತ್ತಿದ್ದ ಮುನಿಗೆ ಸ್ವಲ್ಪ ನೋವಾಗದೆ ಅಸಾಮಾನ್ಯವಾದ ಸನ್ಯಸನ ವಿಧಿಯಿಂದ ಸತ್ತು ಅತ್ಯಂತ ಸುಖದಾಯಕವಾದ ಆನತ ಕಲ್ಪದಲ್ಲಿ ದೇವನಾಗಿ ಹುಟ್ಟಿ ದೇವ ಸುಖವನ್ನು ಅನುಭವಿಸಿ ಬಳಿಕ ಕಾಶಿಪಟ್ಟಣದ ದೊರೆಯಾದ ಅಶ್ವಸೇನ ಹಾಗೂ ರಾಣಿ ಬ್ರಹ್ಮದತ್ತೆಯರಿಗೆ ಮಗನಾಗಿ ಹುಟ್ಟಲೆಂದು ರಾಣಿಯ ಗರ್ಭವನ್ನು ಪ್ರವೇಶಿಸಲು ಅನುವಾಗುತ್ತಾನೆ.

ಆನತೇಂದ್ರನಾದ ದೇವನು ರಾಜರಾಣಿಯರ ಪುಣ್ಯಪ್ರಭಾವದಿಂದ ಪರಿಶುದ್ಧವಾದ ಅವರ ಹೊಟ್ಟೆಯಲ್ಲಿ ಹುಟ್ಟುವನೆಂಬುದನ್ನು ಅವಧಿಜ್ಞಾನದಿಂದ ತಿಳಿದ ಸೌಧರ್ಮೇಂದ್ರನು ಆದರದಿಂದ ಕುಬೇರನಿಗೆ ತಿಳಿಸಲು, ಆನತೇಂದ್ರನು ಆ ದಂಪತಿಗಳ ಗರ್ಭಕ್ಕೆ ಬರುವುದಕ್ಕೆ ಮೊದಲು ಆರು ತಿಂಗಳಿಂದ ಆ ಅಶ್ವಸೇನ ಮಹಾರಾಜನ ಮನೆಯ ಅಂಗಳದಲ್ಲಿ ಪ್ರತಿನಿತ್ಯ ಮೂರುವರೆ ಕೋಟಿ

ರತ್ನಗಳ ಧಾರೆಗಳ ಮಳೆಯನ್ನು ಸುರಿಸುತ್ತಿದ್ದನು. ಇಂದ್ರನು. ದುಃಖವನ್ನು ಕಡಮೆ ಮಾಡುವ ಸುಖಗಳ ಮಡುವಿನಂತಿರುವ ಶ್ರೀ ಹ್ರೀ, ಧೃತಿ, ಕೀರ್ತಿ, ಬುದ್ಧಿ. ಲಕ್ಷ್ಮಿ ಎಂಬ ತನ್ನ ಸ್ತ್ರೀಯರ ಹಾಗೂ ಇತರ ಸ್ವರ್ಗದ ದೇವತೆಯರುಗಳನ್ನು ಜಿನನ ಜನನಿ ಯಾಗಲಿರುವ ಬ್ರಹ್ಮದತ್ತೆಯ ಶುಶ್ರೂಷೆಗಾಗಿ ಕಳುಹಿಸಿದನು. ಆ ದೇವತಾ ಸ್ತ್ರೀಯರು ಆತ್ಮಸಂತೋಷದಿಂದ ಆ ರಾಣಿಗೆ ದಿವ್ಯ ವಾದ ಅನ್ನ, ಪಾನ, ಭೂಷಣ, ಶಯನ, ಆಸನ. ವಸ್ತ್ರ, ಗಂಧ ಲೇಪನ ಮತ್ತು ಪುಷ್ಪ ಸಮೂಹಗಳಿಂದ ಸೇವಿಸುತ್ತ ಗರ್ಭ ಸಂಶೋಧನೆಯನ್ನು ಮಾಡಿದರು. ಹೀಗೆ ಆರುತಿಂಗಳ ಕಾಲ ರಾಣಿಗೆ ಆಶ್ಚರ್ಯವಾಗುವ ರೀತಿಯಲ್ಲಿ ಉಪಚಾರಗಳನ್ನು ಮಾಡು ತ್ತಿರಲು ಒಂದು ದಿವಸ ತಾವರೆಯಂತೆ ರಜಸ್ವಲೆಯಾದ ರಾಣಿಗೆ ಉತ್ತಮವಾದ ನೀರಿನಿಂದ ಚತುರ್ಥಸ್ನಾನವನ್ನು ಮಾಡಿಸಿದರು. ಅತಿಶಯವಾದ ಲಾವಣ್ಯದಿಂದ ಕೂಡಿದ ಜಿನಜನನಿಯಾಗುವ ಬ್ರಹ್ಮದತ್ತಾದೇವಿಯು ಸಂಚರಿಸುವ ಪುಣ್ಯತೀರ್ಥದಂತೆ ಶೋಭಿ ಸುತ್ತ ಹಂಸತೂಲಿಕಾ ತಲ್ಪದಲ್ಲಿ ಸಕಲ ಕಲಾಧರನಾದ ರಾಜ ನೊಂದಿಗೆ ಪವಡಿಸಿರುವಾಗ ಬೆಳಗಿನ ಸಮಯದಲ್ಲಿ ರಾಣಿಯು ಹದಿನಾರು ಸ್ವಪ್ನಗಳನ್ನು ಕಾಣುತ್ತಾಳೆ. ಅವುಗಳ ಫಲವನ್ನು ಪುಣ್ಯ ಪಾಠಕನಿಂದ ತಿಳಿದು ಸಂತೋಷಪಡುತ್ತಾಳೆ. ಇತ್ತ ಆನತೇಂದ್ರನು ಆನತ ಕಲ್ಪದಲ್ಲಿನ ಅಪಾರವಾದ ಸುಖಾಮೃತವನ್ನನುಭವಿಸಿ ಬಂದು ವೈಶಾಖ ಮಾಸದ ಕೃಷ್ಣಪಕ್ಷದ ತದಿಗೆ ತಿಥಿ ವಿಶಾಖಾ ನಕ್ಷತ್ರದಂದು ಬ್ರಹ್ಮದತ್ತಾದೇವಿಯ ಗರ್ಭದಲ್ಲಿ ಬಂದು ನೆಲಸು ತ್ತಾನೆ. ಸರ್ವಶ್ರೇಷ್ಠನಾದ ತೀರ್ಥಂಕರ ಸ್ವಾಮಿಯು ಗರ್ಭದಲ್ಲಿರು ವಾಗ ಸಾಮಾನ್ಯ ಸ್ತ್ರೀಯರುಗಳಿಗುಂಟಾಗುವಂತೆ ಯಾವುದೇ ರೀತಿಯ ಬಯಕೆ. ವ್ಯತ್ಯಾಸಗಳುಂಟಾಗದಿರಲು. ನವಮಾಸ

ತುಂಬಲು. ಗ್ರಹಗಳೆಲ್ಲ ಯೋಗ್ಯವಾದ ರಾಶಿಗಳಲ್ಲಿರಲು, ಪುಷ್ಯ ಮಾಸದ ಕೃಷ್ಣಪಕ್ಷದ ಏಕಾದಶಿಯದಿನ, ಶುಭವಾರ, ಶುಭನಕ್ಷತ್ರ, ಶುಭಕರಣಗಳು ಕೂಡಿ ಬಂದಿರಲು. ದೇವದುಂದುಭಿಗಳ ಮೊಳಗಿನ ಮಧ್ಯ ಜಿನಾರ್ಭಕನು ತಾಯಿಯ ಗರ್ಭದಿಂದ ಹೊರಗೆ ಬಂದು ಕಾಣಿಸಿಕೊಂಡನು. ಆಗ ಪ್ರಕೃತಿಯೆಲ್ಲ ಮನೋಹರವಾಗಿ ಕಂಡಿತು. ಕಲ್ಪವೃಕ್ಷದಿಂದ ಹೂಮಳೆ ಸುರಿಯಿತು. ಇಂದ್ರನಿಗೆ ಆಸನಕಂಪವುಂಟಾಗಿ ಜಿನಸ್ವಾಮಿಯು ಜನಿಸಿದನೆಂಬ ಸೂಚನೆ ದೊರಕಿತು. ಇಂದ್ರನ ಸೂಚನೆಯಂತೆ ಶಚೀದೇವಿಯು ಭೂಲೋಕಕ್ಕೆ ಅವತರಿಸಿ ಬಂದು ಮಾಯಾ ನಿದ್ರೆಯನ್ನು ಕವಿಸಿ ಅಲ್ಲಿ ಮಾಯಾ ಶಿಶುವನ್ನಿಟ್ಟು ಜಿನಾರ್ಭಕನನ್ನು ಮೇರುಗಿರಿಗೆ ಕರೆತಂದು ದೇವತೆಗಳೆಲ್ಲ ಸೇರಿ ಜನ್ಮಾಭಿಷೇಕೋತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ಮಾಡಿದರು. ಪುಣ್ಯ ತೀರ್ಥೋದಕ ಸ್ನಾನ, ಕ್ಷೀರಸ್ನಾನ, ದಧಿಸ್ನಾನಾದಿಗಳನ್ನು ಮಾಡಿಸಿ ಸಮಸ್ತ ದೇವತಾ ಸಮೂಹದೊಡನೆ ಸ್ವಾಮಿಯ ಜನ್ಮಾಭಿಷೇಕವನ್ನು ಮುಗಿಸಿ ಪುನಃ ಕಾಶೀ ಪಟ್ಟಣಕ್ಕೆ ಬಂದು ತಂದೆ-ತಾಯಿಗಳಿಗೆ ಹರ್ಷಾನಂದವುಂಟುಮಾಡುವಂತೆ ಅರಮನೆಯಲ್ಲಿ ಸ್ಥಾಪಿಸಿ, ಜಿನನ ತಂದೆ-ತಾಯಿಗಳನ್ನು ಅತ್ಯುತ್ತಮವಾದ ವಸ್ತ್ರಾಭರಣ ಗಂಧ ಲೇಪನಾದಿಗಳಿಂದ ಪೂಜಿಸಿ. ಜಾತಕರ್ಮೋತ್ಸವಕಾರ್ಯಗಳನ್ನು ಮಾಡಿಸುತ್ತಾ. ಇಂದ್ರನು ನಾನಾ ವಿಧವಾದ ತಾಂಡವ ನೃತ್ಯಾದಿಗಳನ್ನು ಮಾಡಿ. ತಾನು ಸಕಲಾಚಾರ್ಯನೆಂಬುದನ್ನು ತೋರಿ, ದೋಷರಹಿತವಾದ ನೃತ್ಯವು ಸ್ವಪರಹಿತವನ್ನುಂಟುಮಾಡುತ್ತದೆ ಎಂಬುದನ್ನು ನಿಜಮಾಡಿ, ಮಹೋನ್ನತವಾದ ಕೇವಲಜ್ಞಾನಾದಿ ಗುಣಗಳೂ. ಭವಸಾಗರವನ್ನು ದಾಟಲು ಕಾರಣವಾದ ಧರ್ಮೋಪದೇಶ ವಚನಗಳೂ ನಿಜವಾಗಿ ನಿನ್ನ ಪಾರ್ಶ್ವದಲ್ಲಿರುವುದರಿಂದ

ನೀನು ಪಾರ್ಶ್ವತೀರ್ಥೇಶ್ವರನೇ ನಿಜ ಎಂದು ಅನ್ವರ್ಥವಾಗುವಂತೆ ತೀರ್ಥಂಕರನಿಗೆ ಪಾರ್ಶ್ವನಾಥನೆಂದು ನಾಮಕರಣ ಮಾಡಿ. ದೇವತೆಗಳನ್ನು ಪರಿಚಾರಕ್ಕೆಂದು ನೇಮಿಸಿ ಸ್ವರ್ಗಕ್ಕೆ ಹೋದನು.

ಪಾರ್ಶ್ವನಾಥನು ನೋಡುನೋಡುತ್ತಿರುವಂತೆಯೇ ಬಾಲ್ಯ ಕೌಮಾರಾವಸ್ಥೆಗಳನ್ನು ಕಳೆದು, ತಾರುಣ್ಯಾವಸ್ಥೆಗೆ ಬರುತ್ತಾನೆ. ಆಗ ಒಂದು ದಿನ ಪೊರವೊಟಿಲ ಸಿರಿಯನ್ನು ನಿರೀಕ್ಷಿಸಲೆಂದು ಸೇವಕ ಜನದ ಮನದಿಚ್ಛೆಯಂತೆ ಸಕಲಪರಿವಾರದೊಂದಿಗೆ ಹೊರಡುತ್ತಾನೆ. ಹಾಗೆ ಬರುತ್ತಿರುವಾಗ ಕಾಡಿನಲ್ಲೊಬ್ಬ ಅಜ್ಞಾನಿ ಮನಸ್ಸಿಲ್ಲದೆ, ಅಂತರಂಗ ಧ್ಯಾನವಿಲ್ಲದೆ ದೇಹವನ್ನು ತಪಸ್ಸಿನಲ್ಲಿ. ಪಂಚಾಗ್ನಿಗಳ ಮಧ್ಯದಲ್ಲಿ, ವೃಥಾ ಸವೆಸುತ್ತಿರುತ್ತಾನೆ. ಅವನ ಈ ತಪಸ್ಸು ವ್ಯರ್ಥವಾದುದೆಂದು ಅವನಿಗೆ ಕೇಳಿಸುವಂತೆಯೇ ನುಡಿಯುತ್ತಾನೆ. ಅದನ್ನು ಕೇಳಿಸಿಕೊಂಡ ತಪಸ್ವಿಯು ನನ್ನ ತಪಸ್ಸಿನಲ್ಲಿ ದೋಷವಿದ್ದರೆ ತಿಳಿಸು ಎನ್ನಲು, ಅವನ ಆಶ್ರಮಕ್ಕೆ ಬಂದು, ಆ ಅಗ್ನಿಯಲ್ಲಿ ಹತ್ತಿಕೊಂಡು ಉರಿಯುತ್ತಿದ್ದ ಟೊಳ್ಳಾದ ಕಟ್ಟಿಗೆಯನ್ನು ಸೀಳಿಸಿ ಅದರಲ್ಲಿ ಬೇಯುತ್ತಿದ್ದ ಉರಗ-ಉರಗಿಯನ್ನು ತೋರಿ ತನ್ನ ಕರುಣಾದೃಷ್ಟಿಯನ್ನು ಅವುಗಳ ಮೇಲೆ ಚೆಲ್ಲಿ ಪಂಚಪದವನ್ನು ಅವುಗಳ ಕಿವಿಯಲ್ಲಿ ಊದುತ್ತಾನೆ. ಧರಣೇಂದ್ರ-ಪದ್ಮಾವತಿಯರಾದ ಆ ನಾಗದಂಪತಿಗಳೇ ಮುಂದೆ ಕಮಠನಿಂದುಂಟಾಗುವ ಘೋರ ಉಪಸರ್ಗಗಳಿಂದ ಸ್ವಾಮಿಯನ್ನು ರಕ್ಷಿಸುತ್ತಾರೆ. ಇತ್ತ ತಂದೆ ಅಶ್ವಸೇನ ಮಹಾರಾಜ ಯೌವನಸ್ಥನಾದ ಕುಮಾರನಿಗೆ ಮದುವೆ ಮಾಡಬೇಕೆಂದು ಬಯಸಿ ದೇಶವಿದೇಶಗಳಿಂದ ಸುಂದರ ಕನ್ಯಾರತ್ನಗಳನ್ನು ಬರಿಸಿ ವಿವಾಹವಾಗುವಂತೆ ಹೇಳುತ್ತಾನೆ. ಆದರೆ ಸಂಸಾರದ ಅನಿತ್ಯತೆ,

ಅದರಿಂದುಂಟಾಗುವ ಘೋರಪಾಪಗಳನ್ನು ನೆನೆದು, ತಂದೆಗೆ ವಿವರಿಸಿ, ಮೋಕ್ಷಲಕ್ಷ್ಮಿಯನ್ನು ವರಿಸಲಿಚ್ಛಿಸುತ್ತಾನೆ. ಈ ಮಧ್ಯೆ ಸಾಕೇತವರಸ ಜಯಸೇನನು ಉತ್ತಮ ಜಾತಿಯ ಕುದುರೆ ಬೊಂದನ್ನು ಪಾರ್ಶ್ವಕುಮಾರನಿಗೆ ಬಳುವಳಿಯಾಗಿ ಮಹತ್ತರನ ಕೂಡೆ ಕಳುಹಿಸುತ್ತಾನೆ. ಹಾಗೆ ಬಂದ ಮಹತ್ತರನಿಂದ ಅಯೋಧ್ಯೆ ಯಲ್ಲಿ ಜನಿಸಿದ್ದ ಆದಿತೀರ್ಥಂಕರನ ಕಥೆಯನ್ನು ಕೇಳಿದ ಮೇಲೆ ತನ್ನ ಸಮಸ್ತೈಶ್ವರ್ಯವನ್ನು ತೊರೆದು, ಕಷಾಯ ಸಹಾಯ ಸಮಗ್ರಪರಿಗ್ರಹಗಳನ್ನೂ ತೊರೆದು, ಬಾಹ್ಯಾಭ್ಯಂತರ ಪರಿಗ್ರಹ ನಿವೃತ್ತಿಗೆಯ್ದು, ದಿಗಂಬರನಾಗಿ 'ನಮಃ ಸಿದ್ಧೇಭ್ಯಃ' ಎಂದು ಲುಂಚನಕ್ರಿಯಾದಿಗಳನ್ನು ಮಾಡಿಕೊಂಡು, ತಪೋಂಗನಾ ಪಾಣಿ ಗ್ರಹಣ ಮಾಡಿಕೊಂಡು, ಪದ್ಮಖೇಟ ಪುರಾಭಿಮುಖವಾಗಿ ಬಂದು ಪನ್ನೆರಡು ವಿಧವಾದ ಬಾಹ್ಯಾಭ್ಯಂತರ ತಪಸ್ಸುಗಳನ್ನು ಮಾಡಿ ಶಾಂತಿಯನ್ನು ಸಂಪಾದಿಸುತ್ತಾನೆ. ಅಲ್ಲಿಂದ ಹೊರಟು ಅಹಿಚ್ಛತ್ರ ಪುರೋಪಭಾಗಕ್ಕೆ ಬಂದು ಅಲ್ಲಿ ಪ್ರತಿಮಾಯೋಗದಲ್ಲಿ ನಿಂತು ಉಗ್ರವಾದ ತಪಸ್ಸನ್ನು ಮಾಡುತ್ತ ಅಂತರಂಗ ಬಹಿರಂಗ ಕಷಾಯಗಳನ್ನು ತ್ಯಜಿಸುತ್ತಿರಲು, ಪೂರ್ವಜನ್ಮದ ಕಮಠನು ಭೂತಾನಂದನೆಂಬ ರಾಕ್ಷಸನಾಗಿ ಆಕಾಶದಲ್ಲಿ ಬರುತ್ತಿರುವಾಗ ವಿಪುಳಾಚಲದಲ್ಲಿ ಪ್ರತಿಮಾಯೋಗದಲ್ಲಿ ನಿಂತಿದ್ದ ಪಾರ್ಶ್ವನಾಥ ಮುನಿಯ ನೆತ್ತಿಯಮೇಲೆ ಅವನ ವಿಮಾನವು ಕೀಲಿಸಿದಂತೆ ನಿಲ್ಲಲು, ಭೂಮಿಗವತರಿಸಿ ನೋಡಿ ಮುನ್ನಿನ ದ್ವೇಷ ಕಾರಣವಾಗಿ ಭಯಂಕರವಾದ ಭೂತ-ಪ್ರೇತ-ಪಿಶಾಚಿಗಳ ಗುಂಪನ್ನೇ ಸೃಷ್ಟಿಸಿ ಸಹಿಸಲಸಾಧ್ಯವಾದ ಬಾಹ್ಯೋಪಸರ್ಗಗಳನ್ನುಂಟುಮಾಡುತ್ತಾನೆ. ಆದರೆ ಇವುಗಳ ಪರಿವೆಯೇ ಇಲ್ಲದೆ ಅಂತರಂಗ ಧ್ಯಾನದಲ್ಲಿ ಲೀನ ನಾಗಿದ್ದ ಮುನಿಗೆ ರಕ್ಷಣೆಯ ರೂಪದಲ್ಲಿ ಹಿಂದಿನ ಧರಣೇಂದ್ರ-

ಪದ್ಮಾವತಿ ನಾಗದಂಪತಿಗಳು ಬಂದು, ನಾಗರಾಜನು ಅಸುರನನ್ನು ಕೊಂದರೆ ಇಬ್ಬರಿಗೂ ಪಾಪವುಂಟಾಗುವುದೆಂದು ಭಾವಿಸಿ, ತನ್ನ ಸಹಸ್ರ ಹೆಡೆಗಳ ಮಂಡಲವನ್ನು ಮುನಿಯ ಮೇಲೆ ಒಡ್ಡಿದರೆ ಪದ್ಮಾವತಿಯು ಅವರ ಮೇಲೆ ವಜ್ರದ ಛತ್ರಿಯನ್ನು ಹಿಡಿದು, ಅಸುರನ ಎಲ್ಲ ರೀತಿಯ ಉಪಸರ್ಗಗಳಿಂದಲೂ ಸ್ವಾಮಿಯನ್ನು ರಕ್ಷಿಸುತ್ತಾರೆ. ಮುನಿಗಳು ತಮ್ಮ ನಿಶ್ಚಲ ತಪಸ್ಸಿನ ಮೂಲಕ ಅನುಕ್ರಮವಾಗಿ ಕ್ಷಪಕ ಶ್ರೇಣಿಯನ್ನೇರಿ ಉನ್ನತ ಮೋಕ್ಷವರ್ಗಕ್ಕೆ ಸಾಗಿ ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃ ಪರ್ಯಾಯಜ್ಞಾನ ಹಾಗೂ ಕೇವಲ ಜ್ಞಾನವನ್ನು ಪಡೆದು ಮೋಕ್ಷ ಲಕ್ಷ್ಮಿಯನ್ನು ವರಿಸುತ್ತಾರೆ.

ಇತ್ತ ಸೌಧರ್ಮೇಂದ್ರನ ಇಂಗಿತದಂತೆ ಕುಬೇರನು ನಯನ ಮನೋಹರವಾದ ಭೂಮಿಯಿಂದ ಐದುಸಾವಿರ ಬಿಲ್ಲಿನಷ್ಟು ಎತ್ತರದಲ್ಲಿ ಅತ್ಯಂತ ವೈಭವಪೂರ್ಣವಾದ ಸಮವಸರಣವನ್ನು ನಿರ್ಮಿಸಿದನು. ಅದನ್ನು ನೋಡಲು ಸಮಸ್ತ ದೇವತಾ ಸಮೂಹವೇ ನೆರೆದಿತ್ತು. ಲೋಕದ ತುತ್ತ ತುದಿಯಲ್ಲಿರುವ ಮೋಕ್ಷಕ್ಷೇತ್ರವಾದ ಸಿದ್ಧಕ್ಷೇತ್ರದಂತಿರುವ ಸಿಂಹಪೀಠದ ಮೇಲೆ ನಾಲ್ಕು ಬೆರಳಿನಷ್ಟು ಎತ್ತರದಲ್ಲಿ ತೀರ್ಥೇಶ್ವರನು ಸಿದ್ಧ ಪರಮೇಷ್ಠಿ ಗಳಂತೆ ಶೋಭಿಸುತ್ತಿದ್ದನು. (ಹದಿನಾರನೆಯ ಆಶ್ವಾಸದ ಮುಕ್ಕಾಲುಭಾಗ ಸಮವಸರಣದ ವರ್ಣನೆಗೆ ವಿನಿಯೋಗವಾಗಿದೆ). ಇಲ್ಲಿಗೆ ಸಹಸ್ರಾಕ್ಷನಾದ ಇಂದ್ರನು ಶಚೀದೇವಿಯೊಡಗೂಡಿ ಬಂದು ಆ ವೈಭವವನ್ನು ಕಣ್ತುಂಬ ನೋಡಿ ಆನಂದಿಸಿ ಸಮಸ್ತ ದೇವತೆ ಗಳೊಂದಿಗೆ ಸ್ತೋತ್ರ ಸಹಸ್ರಗಳಿಂದರ್ಚಿಸಿ ಪರಮಾನಂದದಿಂದ ನಮಸ್ಕರಿಸುತ್ತಾನೆ. ತಮ್ಮ ಮಗನಿಗೆ ಕೇವಲ ಜ್ಞಾನವುಂಟಾದು ದನ್ನು ತಿಳಿದ ಅಶ್ವಸೇನ-ಬ್ರಹ್ಮದತ್ತೆಯರು ಸಮವಸರಣಕ್ಕೆ

ಬಂದು ದಿವ್ಯಮೂರ್ತಿಯನ್ನು ಕಂಡು ತ್ರಿಪ್ರದಕ್ಷಿಣಂಗೈದು ಅಷ್ಟ ವಿಧಾರ್ಚನೆಯಿಂದ ಭಕ್ತಿಪೂರ್ವಕವಾಗಿ ಪೂಜಿಸುತ್ತಾರೆ. (ಇಲ್ಲಿ ಕವಿ ಪಾರ್ಶ್ವನಾಥಸ್ತುತಿಯ ಅಷ್ಟಕವನ್ನು ಬಳಸಿದ್ದಾನೆ.) ನಂತರ ಅಶ್ವಸೇನ ಮಹಾರಾಜನು ಭವ್ಯ ಜಿನಶರಣ್ಯರಾದ ಸ್ವಯಂಭೂ ಗಣಧರರನ್ನು ಗುರುಭಕ್ತಿ ಪೂರ್ವಕವಾಗಿ ನಮಸ್ಕರಿಸಿ ಜೀವ ಮತ್ತು ಅಜೀವ ಪದಾರ್ಥಗಳ ಸ್ವರೂಪವನ್ನು ವಿವರಿಸುವಂತೆ ಕೇಳಿಕೊಳ್ಳಲು ದಿವ್ಯಜ್ಞಾನವುಳ್ಳ ಗಣಧರರು ಅವುಗಳ ಸ್ವರೂಪ ವನ್ನು ವಿಸ್ತಾರವಾಗಿ ವರ್ಣಿಸುತ್ತಾರೆ. ಇದನ್ನು ಕೇಳಿ ಸಂತುಷ್ಟ ನಾದ ರಾಜನು ಇಂಥ ಮಗನನ್ನು ಪಡೆದು ಧನ್ಯನಾದೆನೆಂದು ಸಂತೋಷಚಿತ್ತನಾಗುತ್ತಾನೆ. ಭವಭವಗಳಲ್ಲಿ ಉಪಸರ್ಗಗಳ ನ್ನುಂಟು ಮಾಡಿದ ಕಮಠನೂ ಪರಮ ಸಂತೋಷವನ್ನು ಹೊಂದಿ ಸ್ವಾಮಿಯ ಚರಣಕಮಲಗಳಿಗೆರಗಿ ತನ್ನ ಮಿಥ್ಯಾತ್ವವನ್ನು ಬಿಟ್ಟು ಸಂಯಕ್ತ್ವವನ್ನು ಕೈಕೊಂಡು ಸಮವಸರಣಕ್ಕೆ ಬಂದು ಉಚಿತ ಸ್ಥಳದಲ್ಲಿ ಕೂರುತ್ತಾನೆ. ಮೂರು ಲೋಕಗಳೂ ಸ್ವಾಮಿಯನ್ನು ಓಲೈಸುತ್ತಿರುತ್ತವೆ. ಹೀಗೆ ಸ್ವಾಮಿಗೆ ಎಪ್ಪತ್ತು ವರ್ಷಕ್ಕೆ ಒಂದು ತಿಂಗಳಿರುವ ತನಕ ಸಮವಸರಣವು ದೇಶಾದ್ಯಂತ ವಿಹರಿಸುತ್ತಿದ್ದು ಕೊನೆಗೆ ಸಮ್ಮೇದ ಗಿರಿಯನ್ನು ಮುಟ್ಟುತ್ತದೆ. ಅಲ್ಲಿ ಎಂಟು ಆತ್ಮ ಗುಣಗಳು ತನ್ನಲ್ಲಿ ನಿಲ್ಲಲು ಪರಮಾತ್ಮನೂ, ಆಕಾರರಹಿತನೂ, ಪಾಪ ಸಮೂಹನಾಶನೂ ಆದ ಪಾರ್ಶ್ವ ತೀರ್ಥಂಕರನು ಸಹಜಾನಂದಾ ನುಭವವೆಂಬ ಎಂಟನೆಯ ಮೋಕ್ಷಸ್ಥಾನದ (ಸಿದ್ಧಭೂಮಿ) ಭೂಮಿಗೆಒಡೆಯನಾಗುತ್ತಾನೆ.(ಮೋಕ್ಷವನ್ನುಹೊಂದುತ್ತಾನೆ).ಆಗ ಸ್ವಾಮಿಯ ಪರಿನಿರ್ವಾಣ (ಮೋಕ್ಷಪ್ರಾಪ್ತಿ) ಕಲ್ಯಾಣ ಪೂಜಾ ಮಹೋತ್ಸವವನ್ನು ನೆರವೇರಿಸಲು ಇಂದ್ರನ ನೇತೃತ್ವದಲ್ಲಿ ಸಮಸ್ತದೇವತಾಪರಿವಾರಗಳೂ ಬಂದಿಳಿಯುತ್ತವೆ.ಸುರಶ್ರೇಷ್ಠನಾದ

ಇಂದ್ರನು ಶಚೀದೇವಿಯೊಡಗೂಡಿ ಬಂದು. ಆನಂದ ನಾಟಕವನ್ನು ಆಡಿ. ಜಿನೇಶ್ವರರ ಪರಿನಿರ್ವಾಣ ಕಲ್ಯಾಣಮಹೋತ್ಸವ ಕಾರ್ಯ ಗಳನ್ನೆಲ್ಲಾ ತಾನೇ ನೆರವೇರಿಸಿ ತನ್ನ ಲೋಕಕ್ಕೆ ಹೋಗುತ್ತಾನೆ.

## ಪಾರ್ಶ್ವಪಂಡಿತನು ಮಾಡಿಕೊಂಡಿರುವ ಕೆಲವು ಬದಲಾವಣೆಗಳು :

ಐತಿಹಾಸಿಕ ವ್ಯಕ್ತಿಯಾಗಿದ್ದ ಪಾರ್ಶ್ವನಾಥ ಅತ್ಯಂತ ಪ್ರಭಾವ ಶಾಲಿಯಾದ ತೀರ್ಥಂಕರನಾಗಿದ್ದ ಎಂಬುದಕ್ಕೆ ಆತನ ಬಗ್ಗೆ ರಚಿತ ವಾಗಿರುವ ಅಸಂಖ್ಯಾತ ಗ್ರಂಥಗಳೇ ಸಾಕ್ಷಿಯಾಗಿವೆ. ಸಂಸ್ಕೃತ. ಪ್ರಾಕೃತ, ಮರಾಠಿ, ಕನ್ನಡ ಮುಂತಾದ ಭಾಷೆಗಳಲ್ಲಿ ಸುಮಾರು ೨೬ಕ್ಕೂ ಮಿಕ್ಕು ಗ್ರಂಥಗಳು ನಾನಾ ರೂಪಗಳಲ್ಲಿ ಪ್ರಕಟವಾಗಿದೆ. ಸಂಸ್ಕೃತದಲ್ಲಿ ರಚಿತವಾಗಿರುವ ಗುಣಭದ್ರಾಚಾರ್ಯರ ಉತ್ತರ ಪುರಾಣದಲ್ಲಿ ಮೊದಲ ಬಾರಿಗೆ ಪಾರ್ಶ್ವನಾಥನ ಚರಿತ್ರೆ ಪ್ರಕಟ ವಾಗಿದೆ. ಅನಂತರ ಕನ್ನಡದಲ್ಲಿ ಚಾವುಂಡರಾಯ ಮೊದಲಬಾರಿಗೆ ತನ್ನ 'ತ್ರಿಷಷ್ಠಿ ಶಲಾಕಾ ಮಹಾಪುರಾಣಂ' ಅಥವಾ 'ಚಾವುಂಡ ರಾಯ ಪುರಾಣಂ'ನಲ್ಲಿ ೨೪ ತೀರ್ಥಂಕರರ ಪುರಾಣವನ್ನೂ ಬರೆದಿ ದ್ದಾನೆ. ಇದರಲ್ಲಿ 'ಪಾರ್ಶ್ವನಾಥ ಪುರಾಣಂ' ೨೩ನೇ ಅಧ್ಯಾಯ ವಾಗಿ ಬಂದಿದೆ. ಗುಣಭದ್ರಾಚಾರ್ಯರ ನಂತರ. ಚಾವುಂಡರಾಯ ನಿಗಿಂತ ಮೊದಲು ಒಂಬತ್ತನೇ ಶತಮಾನದ ಜಿನಸೇನನ 'ಪಾರ್ಶ್ವಾ ಭ್ಯುದಯ' ಮತ್ತು ಹನ್ನೊಂದನೆಯ ಶತಮಾನದ ವಾದಿರಾಜನ 'ಪಾರ್ಶ್ವನಾಥ ಚಾರಿತ್ರ' ಎಂಬ ಎರಡು ಸಂಸ್ಕೃತ ಗ್ರಂಥಗಳೂ ಪಾರ್ಶ್ವನಾಥ ತೀರ್ಥಂಕರನ ಬಗ್ಗೆ ಬಂದಿವೆ. ಆದರೆ ಪಾರ್ಶ್ವ ಪಂಡಿತ ತನ್ನ ಗ್ರಂಥ ರಚನೆಗೆ ಯಾವುದನ್ನು ಆಧಾರವಾಗಿಟ್ಟು

ಕೊಂಡಿದ್ದೇನೆ ಎಂಬುದನ್ನು ಮಾತ್ರ ಹೇಳಿಕೊಂಡಿಲ್ಲ. ಈತನು ಈ ಸಂಸ್ಕೃತ ಗ್ರಂಥಗಳಿಂದ ಏನಾದರೂ ಉಪಕೃತನಾಗಿದ್ದಾನೆಯೇ? ಆಗಿದ್ದರೆ ಎಷ್ಟರ ಮಟ್ಟಿಗೆ? ಎಂಬುದನ್ನು ಅಧ್ಯಯನಮಾಡಿ ನಿರ್ಣಯಿಸಬೇಕಾಗಿದೆ. ಅವನ್ನು ಬಿಟ್ಟರೆ ಗುಣಭದ್ರಾಚಾರ್ಯರ ಉತ್ತರ ಪುರಾಣದ ೭೩ನೇ ಪರ್ವದಲ್ಲಿ ಬರುವ ಹಾಗೂ ಕನ್ನಡ ಕವಿ ಚಾವುಂಡರಾಯನ ಗ್ರಂಥದಲ್ಲಿ ಬರುವ ಕಥೆಯನ್ನು ಆಧಾರವಾಗಿಟ್ಟುಕೊಂಡಿರುವುದು ಕಂಡುಬರುತ್ತದೆ. ಗುಣಭದ್ರಾಚಾರ್ಯರು ೧೭೦ ಶ್ಲೋಕಗಳಲ್ಲಿ ಹೇಳಿದ್ದರೆ, ಚಾವುಂಡರಾಯ ೧೭೦ ಪಂಕ್ತಿಗಳಲ್ಲಿ ಅವರಿಗಿಂತಲೂ ಸಂಕ್ಷೇಪವಾಗಿ ಪಾರ್ಶ್ವನಾಥ ಚರಿತೆಯನ್ನು ಹೇಳಿ ಮುಗಿಸಿದ್ದಾನೆ. ಆದರೆ ಪಾರ್ಶ್ವಪಂಡಿತ ಮಾತ್ರ ಇವರಿಬ್ಬರನ್ನೂ ಮೀರಿಸಿ ೧೬ ಆಶ್ವಾಸಗಳ ಒಂದು ದೊಡ್ಡ ಚಂಪೂಕಾವ್ಯವನ್ನೇ ರಚಿಸಿದ್ದಾನೆ. ಅಂದಮೇಲೆ ಹಿಂದಿನವರನ್ನು ಅನುಸರಿಸಿದ್ದರೂ ಅಲ್ಲಲ್ಲೇ ಸಾಕಷ್ಟು ಮಾರ್ಪಾಟುಗಳನ್ನು ಮಾಡಿಕೊಂಡು ಕತೆಯನ್ನು ಹಿಗ್ಗಲಿಸಿ ಬರೆದಿದ್ದಾನೆ ಎಂಬುದು ಮೇಲುನೋಟಕ್ಕೆ ಕಂಡುಬರುತ್ತದೆ. ಕಾವ್ಯದಲ್ಲಿ ಮೂಲಕಥೆಯಲ್ಲಿನ ಅಂಶಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ.

ಉತ್ತರ ಪುರಾಣದಲ್ಲಿ ಕಮಠ-ಮರುಭೂತಿಗಳು ಅರವಿಂದ ರಾಜನ ಮಂತ್ರಿಗಳಾದರು. ಅವರೀರ್ವರಲ್ಲಿ ಕಿರಿಯನು ನೀತಿಜ್ಞನಾಗಿದ್ದನು. ದುರಾಚಾರವುಳ್ಳವನೂ ಅಧಮನೂ ಆದ ಕಮಠನು ವಸುಂಧರಿಯ ನಿಮಿತ್ತದಿಂದ ಮರುಭೂತಿಯನ್ನು ಕೊಂದನು ಎಂದು ಮಾತ್ರ ಹೇಳಿದೆ. ಆದರೆ ಪಾರ್ಶ್ವಪಂಡಿತನು ತನ್ನ ಪಾರ್ಶ್ವನಾಥ ಪುರಾಣದಲ್ಲಿ ಅಲ್ಪ ಬದಲಾವಣೆಯೊಂದಿಗೆ ವಿಸ್ತಾರವಾಗಿ, ಅತ್ಯಂತ ಮನೋಜ್ಞವಾಗಿ, ಸುಂದರ ಪ್ರಸಂಗವನ್ನಾಗಿ ಚಿತ್ರಿಸಿ ಮುಂದೆ ತೀರ್ಥಂಕರನಾಗಿ ಹುಟ್ಟಲಿರುವ ಮರುಭೂತಿಗೆ

ಅಣ್ಣನೇ ಆದ ಕಮಠನು ಜನ್ಮ ಜನ್ಮಾಂತರಗಳಲ್ಲಿ ಹೇಗೆ ಉಪಸರ್ಗಗಳನ್ನುಂಟುಮಾಡುತ್ತಾನೆ ಎಂಬುದಕ್ಕೆ ಭದ್ರವಾದ ತಳಹದಿಯನ್ನು ನಿರ್ಮಿಸಿ ಇವರಿಬ್ಬರ ಪರಸ್ಪರ ವಿರೋಧಗುಣಗಳನ್ನು ಜೀವಂತವಾಗಿ ವರ್ಣಿಸುವುದರ ಮೂಲಕ ಕಮಠ-ಮರುಭೂತಿಯರ ಪಾತ್ರಗಳನ್ನು ಕಡೆದು ನಿಲ್ಲಿಸಿದ್ದಾನೆ. ಇಲ್ಲಿ ಕಮಠನ ಸ್ವಭಾವವನ್ನು ತಿಳಿದ ಸಹಜ ವೈರಾಗ್ಯವನ್ನು ತಳೆದ ವಿಶ್ವಭೂತಿ, ಪ್ರಾಜ್ಞನೂ ಪರಿಜನರಿಗೆ ಪತಿಯೂ ಮನೋಜ್ಞನೂ ಆದ ಕಿರಿಯ ಮಗ ಮರುಭೂತಿ ಇರುವಾಗ, ಅಜ್ಞನೂ ತನ್ನ ಪದವಿಗೆ ಅಯೋಗ್ಯನೂ ಆದ ಕಮಠನನ್ನು ತನ್ನ ರಾಜನ ಬಳಿ ಹೇಗೆ ಮಂತ್ರಿಯಾಗಿ ಒಪ್ಪಿಸಲಿ ಎಂದು ತನ್ನ ಮನಸ್ಸಿನಲ್ಲಿ ನಿರ್ಧರಿಸಿ 'ನಿಜಚಿತ್ತವೃತ್ತಿಯೊಳ್ ಮುಂಪುಟ್ಟಿದ ಸಂಸಾರ ಕಾರಣಮಪ್ಪಜ್ಞಾನಮನುದಾಸೀನಂ ಮಾಡುವಂತೆ ಕಮಠನನುದಾಸೀನಂ ಮಾಡಿ ಬಟಿಕ್ಕುದಯಿಸಿದ ವಿವೇಕಮಂ ಸ್ವೀಕರಿಪಂತೆ ಮರುಭೂತಿಯುಂ ಸ್ವೀಕರಿಸಿ." ಅರವಿಂದ ಮಹಾರಾಜನ ಬಳಿಗೆ ಕರೆದುಕೊಂಡು ಹೋಗಿ ಮರುಭೂತಿಯನ್ನು ತಮ್ಮ ಮಂತ್ರಿಯನ್ನಾಗಿ ಮಾಡಿಕೊಂಡು ಬೆಸಕಯ್ವುದು' ಎಂದು ತಂದೆಯೇ ಹೇಳಿ ಮರುಭೂತಿಯನ್ನು ಮಾತ್ರ ಮಂತ್ರಿಯಾಗಿ ಒಪ್ಪಿಸುತ್ತಾನೆ. ಈ ರೀತಿಯ ಬದಲಾವಣೆ ತನ್ನ ಮುಂದಿನ ವಿವರಣೆಗಳ ದೃಷ್ಟಿಯಿಂದ ಅತ್ಯಂತ ಔಚಿತ್ಯಪೂರ್ಣವಾಗಿದೆ.

ವಜ್ರವೀರನೆಂಬ ರಾಜನ ಪ್ರಸಂಗವನ್ನು ಸೃಷ್ಟಿಸಿ ಅರವಿಂದ ರಾಜನ ರಾಜ್ಯದಲ್ಲಿ ಅತಿಕ್ರಮಿಸಿ ಬಂದ. ಅದರಿಂದ ಕೋಪೋದ್ರಿಕ್ತನಾದ ಅರವಿಂದ ಮಹಾರಾಜನು ತನ್ನ ವಿಶಾಲವಾದ ಸೇನೆಯೊಂದಿಗೆ ದಂಡೆತ್ತಿ ಹೋಗಿ ಆತನನ್ನು ಸೋಲಿಸಿ ಮಗನಿಗೆ ಪಟ್ಟಕಟ್ಟಿದ ವಿಷಯವನ್ನು ಬಹಳ ಸುಂದರವಾಗಿ, ವಿಸ್ತಾರವಾಗಿ

ಚಿತ್ರಿಸಿದ್ದಾನೆ. ಈ ಪ್ರಸಂಗದಲ್ಲಿ ಅರವಿಂದ ಮಹಾರಾಜನ ವೀರೋದಾತ್ತಗುಣಗಳು, ಆತನ ಸೇನಾಪತಿಗಳ ಶೌರ್ಯ-ಪರಾಕ್ರಮಗಳು. ದೂತನ ಕಾರ್ಯವಿಚಕ್ಷಣತೆ, ಮಂತ್ರಿಗಳ ಮುತ್ಸದ್ದಿತನ ಹಾಗೂ ರಾಜಕೀಯ, ನಯ-ನೀತಿ-ನೈಪುಣ್ಯಗಳನ್ನು ಕಾವ್ಯದಲ್ಲಿ ತಂದು ಸಮಕಾಲೀನ ಚಿತ್ರವನ್ನು ಕೊಟ್ಟಿರುವುದಲ್ಲದೆ ತಾವು ಆ ರಾಜನ ಮೇಲೆ ದಂಡೆತ್ತಿಹೋದಾಗ ಕಮಠನನ್ನು ರಾಜ್ಯದ ಉಸ್ತುವಾರಿಗೆಂದು ನೇಮಿಸಿ, ಅವನ ದುರಾಚಾರ, ದುರ್ವೃತ್ತಿಗಳ ಬೆಳಸಿಗೆ ಅವಕಾಶವನ್ನು ಕಲ್ಪಿಸಿಕೊಟ್ಟು ಈ ಭಾಗ ಅತ್ಯಂತ ರೋಚಕವಾಗುವಂತೆ ಕವಿ ಚಿತ್ರಿಸಿದ್ದಾನೆ. ಈ ಭಾಗದಲ್ಲಿ ಅರವಿಂದ ಮಹಾರಾಜ, ಕಮಠ, ವಾಯುಭೂತಿಗಳ ಪಾತ್ರಗಳು ಉಜ್ವಲವಾಗಿ ಮೂಡಿ ಬಂದಿವೆ. ಶೃಂಗಾರ ವರ್ಣನೆಗೂ ಈ ಭಾಗವನ್ನು ಕವಿ ಯಥೇಷ್ಟವಾಗಿ ಬಳಸಿಕೊಂಡಿದ್ದಾನೆ.

ಉತ್ತರ ಪುರಾಣದಲ್ಲಿ ವಿಶ್ವಸೇನನ ಹೆಂಡತಿ, ಪಾರ್ಶ್ವತೀರ್ಥಂಕರನ ತಾಯಿಯ ಹೆಸರು 'ಬ್ರಾಹ್ಮಿ' ಎಂದಿದೆ. ಪಾರ್ಶ್ವ ಪಂಡಿತನು ಇದನ್ನು 'ಬ್ರಹ್ಮದತ್ತೆ' ಎಂದು ಮಾರ್ಪಡಿಸಿಕೊಂಡಿದ್ದಾನೆ. 'ಚಾವುಂಡರಾಯ ಪುರಾಣ'ದಲ್ಲಿ ಬ್ರಾಹ್ಮಿಯನ್ನು 'ಬ್ರಹ್ಮಿಲಾದೇವಿ' ಎಂದು ಕರೆದಿದ್ದಾನೆ. ಮೂಲಕಥೆಯ ಪ್ರಕಾರ ಇಂದ್ರನು ಆಸನ ಕಂಪನದಿಂದ ತೀರ್ಥಂಕರರ ಜನನವನ್ನು ತಿಳಿದು ಬಂದು ಮಂದರಪರ್ವತದ ಮಸ್ತಕದಲ್ಲಿ ಜನ್ಮಾಭಿಷೇಕ ಕಲ್ಯಾಣ ಪೂಜೆಯನ್ನು ನೆರವೇರಿಸಿದನಂತರ ಈ ಶಿಶುವಿಗೆ ಪಾರ್ಶ್ವನೆಂಬ ಹೆಸರಿಟ್ಟು ಆತನನ್ನು ತಂದು ತಂದೆ-ತಾಯಿಗಳಿಗೆ ಸಮರ್ಪಿಸುತ್ತಾನೆ. ಪಾರ್ಶ್ವಪಂಡಿತನು ಈ ಪ್ರಸಂಗವನ್ನು ವಿಸ್ತಾರವಾಗಿ ವರ್ಣಿಸಿ ಜನ್ಮಾಭಿಷೇಕವಾದಮೇಲೆ ಜಿನಶಿಶುವನ್ನು ತಂದೆ-ತಾಯಿಗಳ ಬಳಿಗೆ ತಂದು ಅವರ ಸಮ್ಮುಖದಲ್ಲಿ ಮಹೋನ್ನತವಾದ ಕೇವಲ

ಜ್ಞಾನಾದಿಗುಣಗಳೂ, ಭವಸಾಗರವನ್ನು ದಾಟಲು ಕಾರಣವಾದ ಧರ್ಮೋಪದೇಶ ವಚನಗಳೂ ನಿಜವಾಗಿ ನಿನ್ನ ಪಾರ್ಶ್ವದಲ್ಲಿರುವುದರಿಂದ ನೀನು ಪಾರ್ಶ್ವ ತೀರ್ಥೇಶ್ವರನೇ ನಿಜ ಎಂದು ತೀರ್ಥಂಕರನಿಗೆ ಅನ್ವರ್ಥನಾಮವನ್ನಿಟ್ಟಿರು ಎಂದು ಹೇಳಿರುವುದು ಹೆಚ್ಚು ಅರ್ಥವತ್ತಾಗಿದೆ.

ಇನ್ನೊಂದು, ಮಹೀಪಾಲಪುರಾಧಿಪತಿ ಮಹೀಪಾಲನ ಪ್ರಸಂಗ. ಒಮ್ಮೆ ಪಾರ್ಶ್ವನಾಥನು ಕ್ರೀಡೆಗೋಸ್ಕರ ತನ್ನ ಸೇನೆಯೊಡನೆ ಪಟ್ಟಣದ ಹೊರಕ್ಕೆ ಬಂದಾಗ ಆಶ್ರಮವನದಲ್ಲಿ ತನ್ನ ತಾಯಿಯ ತಂದೆಯು. ತನ್ನ ಪಟ್ಟಮಹಿಷಿಯನ್ನು ಕಳೆದುಕೊಂಡ ದುಃಖದಿಂದ ತಾಪಸ ದೀಕ್ಷೆಯನ್ನು ಹೊಂದಿ ಪಂಚಾಗ್ನಿ ಮಧ್ಯದಲ್ಲಿದ್ದು ತಪಸ್ಸು ಮಾಡುತ್ತಿದ್ದ ಮಹೀಪಾಲನನ್ನು ಕಂಡು ಅನಾದರದಿಂದ ಆತನಿಗೆ ನಮಸ್ಕರಿಸದೆ ತಾಪಸಿಯ ಪಕ್ಕದಲ್ಲಿ ನಿಲ್ಲುತ್ತಾನೆ. ಆಗ ಪಾರ್ಶ್ವನಾಥ ತೀರ್ಥಂಕರನನ್ನು ನಿಂದಿಸಿ. ಕೋಪದಿಂದ ಮನಃಕ್ಷೋಭೆಯುಂಟಾಗಿ. ಶಾಂತವಾದ ಬೆಂಕಿಗೆ ಹಾಕಲು ಮತ್ತೆ ತಾನೇ ಕೊಡಲಿಯಿಂದ ಕಟ್ಟಿಗೆಯನ್ನು ಸೀಳಲು ಉದ್ಯುಕ್ತನಾದಾಗ ' ಸೀಳಬೇಡ. ಆ ಕಟ್ಟಿಗೆಯಲ್ಲಿ ಪ್ರಾಣಿಗಳಿವೆ ' ಎಂದು ಕುಮಾರನು ಹೇಳಿದರೂ ಕಡಿದಾಗ ಅದರಲ್ಲಿದ್ದ ಹೆಣ್ಣು-ಗಂಡು ಹಾವುಗಳೆರಡೂ ತುಂಡಾಗುತ್ತವೆ. ಆಗ ತೀರ್ಥಂಕರನ ಜೊತೆಯಲ್ಲಿದ್ದ ರಾಜಕುಮಾರ ಸುಧಾಮನಿಗೂ ತಾಪಸನಿಗೂ ವಾಗ್ವಾದ ನಡೆಯುತ್ತದೆ. ತೀರ್ಥಂಕರನು ತನ್ನ ಕರುಣಾರ್ದ್ರದೃಷ್ಟಿಯಿಂದ ನೋಡಿ ಪಂಚಪರಮೇಷ್ಠಿ ಮಂತ್ರಗಳನ್ನು ಅವುಗಳ ಕಿವಿಯಲ್ಲಿ ನುಡಿಯುತ್ತಾನೆ. ಮುನ್ನಿನ ಭವದ ಈ ಕಮಠ ಜೀವವೇ ಸತ್ತು ಮುಂದೆ ಶಂಬರ ಜೀವನಾಗಿ ಹುಟ್ಟುತ್ತಾನೆ. ಈ ಪ್ರಸಂಗ ಮೂಲದಲ್ಲಿ ೨೫ ಶ್ಲೋಕಗಳಲ್ಲಿ ವಿಸ್ತಾರವಾಗಿ ಬಂದಿದೆ. 'ಚಾವುಂಡರಾಯ ಪುರಾಣ

ದಲ್ಲಿ ಮಹೀಪಾಲನನ್ನು ಜಿನಕುಮಾರನ ತಾಯಿಯ ಅಣ್ಣ. ಸೋದರಮಾವ. ಎಂದು ಹೇಳಿದೆ. ಪಾರ್ಶ್ವಪಂಡಿತನಲ್ಲಿ ಆ ಹೆಸರೂ ಇಲ್ಲ. ಸಂಬಂಧವೂ. ಅಷ್ಟು ವಿವರಗಳೂ ಇಲ್ಲ. ಕೇವಲ 'ತಪಃ ಸಾರಾಸಾರತೆಯನಱಿಯದ ನಿರ್ಬುದ್ಧಿ. ಬಹಿರಾತ್ಮಂ, ಅಂತಸ್ತತ್ತ್ವವನಱಿಯದವಂ' ಎಂದಷ್ಟೆ ಇದೆ. ಇಲ್ಲಿ ಜಿನ ಕುಮಾರನು ತಾನೇ ಕಟ್ಟಿಗೆಯನ್ನು ಬೆಂಕಿಯಿಂದ ತೆಗೆದು ಸೀಳಿ ಅದರಲ್ಲಿದ್ದ ದಂಪತಿಗಳನ್ನು ತೋರಿ ಕರುಣೆಯಿಂದ ನೋಡಲು ಗಂಡು ಧರಣೇಂದ್ರನಾಗಿ. ಹೆಣ್ಣು ಪದ್ಮಾವತಿಯಾಗಿ ಹೋಗು ತ್ತಾರೆ. ಜಿನನಿಂದ ಹೀಗೆ ಉಪಕೃತರಾದ ನಾಗದಂಪತಿಗಳು ಮುಂದೆ ಶಂಬರನಿಂದುಂಟಾಗುವ ಉಪಸರ್ಗಗಳಿಂದ ತೀರ್ಥಂಕರ ನನ್ನು ರಕ್ಷಿಸಿ ತಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತವೆ. ಹೀಗೆ ಈ ಪ್ರಸಂಗ ಅತ್ಯಂತ ಸಹಜವಾಗಿ ತೀರ್ಥಂಕರನ ಮಹಿಮೆಯನ್ನು ತಿಳಿಸುವಂತೆ ಬಂದು ಪ್ರಸಂಗವನ್ನು ಸಾರ್ಥಕಗೊಳಿಸಿದೆ.

ಪಾರ್ಶ್ವನಾಥ ತೀರ್ಥಂಕರನನ್ನು ಕುರಿತು ಬರೆದಿರುವ ಕೆಲವು ಗ್ರಂಥಗಳಲ್ಲಿ ಕುಶಸ್ಥಲದ ರಾಜನಾದ ಪ್ರಸೇನಜಿತ್ ಎಂಬುವನ ಮಗಳಾದ ಪ್ರಭಾವತಿಯನ್ನು ತನ್ನ ತಂದೆಯ ಕೋರಿಕೆಯಂತೆ ಪಾರ್ಶ್ವನಾಥನು ಮದುವೆಯಾದನೆಂದು ಹೇಳಿದೆ. ಇದೇ ಸಂದರ್ಭ ದಲ್ಲಿ ಪಾರ್ಶ್ವನಾಥನು ಯುವರಾಜಕುಮಾರನನ್ನು ಎದುರಿಸುವ ಪ್ರಸಂಗ ಬಂದು, ಪರಾಕ್ರಮಿಯಾದ ಪಾರ್ಶ್ವನಾಥನನ್ನು ಎದುರಿಸಲಾಗದೆ ಆತನು ಕ್ಷಮೆ ಕೋರಿದಂತೆಯೂ ಹೇಳಲಾಗಿದೆ. ಆದರೆ ಪಾರ್ಶ್ವಪಂಡಿತನ ಈ ಕೃತಿಯಲ್ಲಿ ಈ ಪ್ರಸಂಗವೇ ಇಲ್ಲ. ಪಾರ್ಶ್ವನಾಥನ ತಂದೆ-ತಾಯಿಗಳು ಅತ್ಯಂತ ಉತ್ಸಾಹದಿಂದ ಮಗನ ಮದುವೆಯನ್ನು ಮಾಡಬೇಕೆಂದು ದೇಶ ದೇಶದ ರಾಜ ಕುಮಾರಿಯರನ್ನು ಕರೆಸಿ ಮದುವೆಯಾಗೆಂದು ಕೇಳಿದಾಗ.

ಸಂಸಾರದ ಅನಿತ್ಯತೆ ಹಾಗೂ ಅದರಿಂದುಂಟಾಗುವ ಬವಣೆಗಳನ್ನು ತಂದೆ-ತಾಯಿಗಳಿಗೆ ತಿಳಿಯಹೇಳಿ, ರಾಜ ಕನ್ಯೆಯರನ್ನು ವರಿಸುವ ಬದಲು ಮುಕ್ತಿ ಕನ್ಯೆಯನ್ನು ವರಿಸಿ ಘೋರವಾದ ತಪಸ್ಸನ್ನು ಕೈಕೊಳ್ಳುತ್ತಾನೆ. ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣದಲ್ಲಿ. ಚಾವುಂಡರಾಯ ಪುರಾಣದಲ್ಲಂತೂ ಈ ವಿಷಯದ ಪ್ರಸ್ತಾಪವೇ ಇಲ್ಲ.

**ಕೃತಿ ವಿಮರ್ಶೆ:** 'ಪಾರ್ಶ್ವನಾಥಪುರಾಣ' ಹೆಸರೇ ಸೂಚಿಸುವಂತೆ ೨೩ನೇ ತೀರ್ಥಂಕರ ಪಾರ್ಶ್ವನಾಥನನ್ನು ಕುರಿತು ಬರೆದಿರುವ ಜೈನ ಸಂಪ್ರದಾಯದ ಪುರಾಣ. ಇದಕ್ಕನುಗುಣವಾಗಿ ಪುರಾಣದ ಎಲ್ಲ ಲಕ್ಷಣಗಳೂ ಈ ಕಾವ್ಯದಲ್ಲಿ ಬಂದಿವೆ. ಚಂಪೂ ಕಾವ್ಯವಾದ ಈ ಪುರಾಣದಲ್ಲಿ ತೀರ್ಥಂಕರನಿಗೆ ಸಂಬಂಧಿಸಿದಂತೆ ಪಂಚಕಲ್ಯಾಣ ಮಹೋತ್ಸವಗಳು ಅತ್ಯಂತ ವಿವರವಾಗಿ ಬಂದಿವೆ. ಇವಿಷ್ಟನ್ನೇ ಹೊರಗೆ ತೆಗೆದಿಟ್ಟರೆ ಜೈನಧರ್ಮಕ್ಕೆ ಅನುಗುಣವಾದ ಪಂಚಕಲ್ಯಾಣಗಳ ಒಂದು ಸ್ವತಂತ್ರ ಪುಸ್ತಿಕೆಯಾಗುತ್ತದೆ. ಈ ವರ್ಣನೆಗಳ ಜೊತೆಯಲ್ಲಿ ವಿವಿಧ ನರಕಗಳ ವರ್ಣನೆ. ಯುದ್ಧ ವರ್ಣನೆ, ದಿಗ್ವಿಜಯ ವರ್ಣನೆಗಳು ಪುಷ್ಕಳವಾಗಿ ಬಂದಿವೆ. ಕಾವ್ಯದಲ್ಲಿ ಇರಲೇ ಬೇಕೆಂದು ಅಂದಿನ ಕವಿಗಳು ನಿಯಮ ವೆಂಬಂತೆ ಭ್ರಮಿಸಿದ್ದ ಸಮುದ್ರ. ಪರ್ವತ. ಸೂರ್ಯೋದಯ. ಚಂದ್ರೋದಯ, ನಗರ. ವೇಶ್ಯಾವಾಟಿ. ಮುಂತಾದ ಹದಿನೆಂಟೂ ವರ್ಣನೆಗಳು ತಪ್ಪದೆ ವಿಸ್ತಾರವಾಗಿಯೇ ಬಂದಿವೆ. ಶೃಂಗಾರ ರಸಕ್ಕೆ ಪೋಷಕವಾಗುವಂತೆ ಸುರ-ನರನಾರಿಯರ ಭೂರಿ ವರ್ಣನೆ ಈ ಕಾವ್ಯದಲ್ಲಿ ತುಂಬಿಕೊಂಡಿದೆ. ಧಾರ್ಮಿಕ ಕಾವ್ಯವಾದುದರಿಂದ ವೈರಾಗ್ಯ, ತಪಸ್ಸುಗಳ ವಿವರಗಳು. ಹಾಗೂ ತೀರ್ಥಂಕರನಾಗ ಲಿರುವ ಜೀವಿಗೆ ಉಂಟಾಗುವ ಉಪಸರ್ಗಗಳು ಇವುಗಳ ವರ್ಣನೆ

ಗಳೂ ವಿಪುಲವಾಗಿ ಬಂದಿವೆ. ಹೀಗೆ ವೀರ, ಭೀಭತ್ಸ, ಶೃಂಗಾರ, ಶಾಂತ ಮುಂತಾದ ರಸಗಳು ಈ ಕಾವ್ಯದಲ್ಲಿ ಹಾಸುಹೊಕ್ಕಾಗಿ ಬಂದಿವೆ. ಇದರ ಕಥಾಭಾಗವನ್ನು ಗಮನಿಸಿದಾಗ ಈ ಎಲ್ಲ ಅಂಶ ಗಳ ಪಕ್ಷಿನೋಟವನ್ನು ಕಾಣಬಹುದು.

ಪಾರ್ಶ್ವಪಂಡಿತನಿಗೆ ಭಾಷೆಯಮೇಲೆ ಸೊಗಸಾದ ಪ್ರಭುತ್ವ ವಿದೆ. ಯಾವುದೇ ಭಾವವನ್ನು ಅತ್ಯಂತ ಸಮರ್ಥವಾಗಿ, ಔಚಿತ್ಯಪೂರ್ಣವಾಗಿ, ಲೀಲಾಜಾಲವಾಗಿ, ಪ್ರತಿಬಿಂಬಿಸುವ ಸಾಮರ್ಥ್ಯ ಈತನ ಶೈಲಿಗಿದೆ ಎಂಬುದನ್ನು ಈ ಗ್ರಂಥದ ಪ್ರತಿ ಪುಟದಲ್ಲೂ ಗಮನಿಸಬಹುದು. ಹೀಗಾಗಿ ಚಂಪೂ ಮಾರ್ಗದ ಪ್ರೌಢವೂ ಬಂಧ ಬಂಧುರವೂ ಸಂಸ್ಕೃತಪದ ಭೂಯಿಷ್ಠವೂ ಆದ ಸಮಸ್ತಪದ ಶೈಲಿಯನ್ನು ಈತನ ಕಾವ್ಯದಲ್ಲಿ ಕಾಣಬಹುದು. ಅಲ್ಲಲ್ಲೆ ರಾಜಕೀಯದ ನಯ-ನೀತಿಗಳ ಪ್ರಸ್ತಾಪವೂ ಇಲ್ಲಿ ಬಂದಿದೆ. ಧರ್ಮ ಪ್ರಧಾನವೂ ಪಾಂಡಿತ್ಯಪೂರ್ಣವೂ ಆದ ಈ ಗ್ರಂಥದಲ್ಲಿ ಕಾವ್ಯ ಗುಣವನ್ನು ಅರಸುವುದು ಉಚಿತವಲ್ಲವೇನೋ? ಆದರೂ ಅಲ್ಲಲ್ಲೆ ಕಾವ್ಯದ ಹೊಳಹನ್ನು ಈ ಗ್ರಂಥದಲ್ಲಿ ಕಾಣಬಹುದು. ಈ ಕಾವ್ಯದ ಆರಂಭದ ಆಶ್ವಾಸಗಳಲ್ಲಿ ತೀರ್ಥಂಕರನ ಮೊದಲ ಭವದಲ್ಲಿ ಬರುವ ಕಮಠ-ಮರುಭೂತಿಯರ ಪ್ರಸಂಗ ಕವಿಯಲ್ಲಿ ಕಾವ್ಯಗುಣವಿದೆ ಎನ್ನುವುದನ್ನು ತೋರಿಸುವುದಕ್ಕೆ ಉತ್ತಮ ಉದಾಹರಣೆಯಾಗಿದೆ. ಮೇಲೆ ಕೊಟ್ಟಿರುವ ಕಥಾಭಾಗದಲ್ಲಿ ಇದನ್ನು ತಕ್ಕಮಟ್ಟಿಗೆ ಗಮನಿಸಬಹುದು. ಕಥೆಗಿಂತ ವರ್ಣನೆ ವಿಪುಲವಾಗಿ ಬಂದಿರುವ ಈ ಕಾವ್ಯದಲ್ಲಿ ವಿವಿಧ ವಸ್ತುಗಳ ವರ್ಣನೆಯ ಮಾದರಿಗಳಾಗಿ ಕೆಲವನ್ನು ಗಮನಿಸಬಹುದು.

ಕಾವ್ಯದ ಮೊದಲನೆಯ ಆಶ್ವಾಸದಲ್ಲಿಯೇ ವರ್ಣಿಸಿರುವ ಸಮುದ್ರವನ್ನು ಪಾರ್ಶ್ವತೀರ್ಥೇಶನಿಗೆ ಹೋಲಿಸಿರುವುದು ಅತ್ಯಂತ ಸೊಗಸಾಗಿದೆ—

ಉರುಗೇಂದ್ರಾಧಿಸುತಾಂತರಂಗ ಬಹಿರಂಗ ಶ್ರೀಯುತಂ ವೃತ್ತರ
ತ್ನರುಚಿವ್ಯಾವೃತನಿಷ್ಕಳಂಕಹೃದಯಂ ನಿತ್ಯಂ ಗಭೀರಂ ಸುರಾ
ಸುರಸೇವ್ಯಂ ಕಮಠ ಪ್ರಣೂತ ವಿಭವಂ ಶ್ರೀಪಾರ್ಶ್ವತೀರ್ಥೇಶನಂ
ತಿರೆ ಪೂರ್ಣಂ ಲವಣಾರ್ಣವಂ ಸೊಗಯಿಕುಂ ನೀಲಪ್ರಭಾಡಂಬರಂ ೧–೧೦೪

ಆದಿ ಮಧ್ಯ ಉನ್ನತ ಲೋಕಗಳನ್ನು ವಿಭಾಗಿಸುವಂತಿದ್ದ ಪರ್ವತವನ್ನು ಈ ರೀತಿ ವರ್ಣಿಸಿದ್ದಾನೆ—

ಪೃದಿದಿಂದ್ರಾಚಳದೊಂದು ಚೆಲ್ವನದನಿನ್ನೇವಣ್ಣಿಪೆಂ ನಾಗಲೋ
ಕದ ಚೆಲ್ವಂ ಬಿಡದಿಕ್ಕಿ ಮೆಟ್ಟಿದುದು ರತ್ನಶ್ರೇಣಿಯಿಂ ಮಧ್ಯಲೋ
ಕದ ಚೆಲ್ವಂ ಗೆಡೆಗೊಂಡುದಿಂದ್ರ ಮಣಿಜಾತವ್ರಾತದಿಂ ನಾಕಲೋ
ಕದ ಚೆಲ್ವಂ ಸಲೆ ತಾಳ್ದಿ ನಿಂದುದದು ಚಂಚಜ್ಜ್ವಾಳಿಕಾಲೀಲೆಯಿಂ ೧–೧೦೬

ಕಮಠ-ಮರುಭೂತಿಯರ ತಂದೆ ವಿಶ್ವಾವಸುವಿಗೆ ವೈರಾಗ್ಯ ಮೂಡುವಂತೆ ದೇಹವನ್ನು ಆಕ್ರಮಿಸಿದ ಮುಪ್ಪಿನ ವರ್ಣನೆ ಎಷ್ಟೊಂದು ಸಹಜವಾಗಿ ಮೂಡಿ ಬಂದಿದೆ ನೋಡಿ—

ಅವಿರಳ ಕೋಪದಿಂ ಪಗೆಯನೊರ್ಮೆಯೆ ಕೊಲ್ಲದೆ ನಿಂದು ನಿಂದು ತ
ಳ್ತವಯವಮಂ ವಿಭೇಧಿಸುವನಂದದೆ ಪಲ್ಗಳನೊರ್ಮೆ ಪೊಣ್ಮೆಯಿಂ
ಕಿವಿಗಳನೊರ್ಮೆ ಕಣ್ಗಳನದೊರ್ಮೆ ಪದಂಗಳನೊರ್ಮೆ ಭೇದಿಸು
ತ್ತವಯವದಿಂದೆ ಕೊಲ್ವ ಯಮಕಿಂಕರನೀ ಪಿರಿದಪ್ಪ ಮುಪ್ಪಿನೊಳ್ ೧–೧೦೯

ದೇಹದ ಒಂದೊಂದೂ ಅವಯವವನ್ನು ಮುತ್ತುವ ಈ ಮುಪ್ಪು ಯಮದೂತನೇ ಸರಿ ಎಂದು ವರ್ಣಿಸಿದ್ದಾನೆ.

ಅರವಿಂದ ಮಹಾರಾಜ ವಜ್ರವೀರನ ಮೇಲೆ ಯುದ್ಧಕ್ಕೆ ಸೇನಾ ಸಮೇತನಾಗಿ ಹೊರಡುತ್ತಾನೆ. ಆ ಸಂದರ್ಭದಲ್ಲಿ ಮೃತ್ಯುವಿನೊಂದಿಗೆ ಹೋರಾಡಲು ಹೊರಟ ಯೋಧರು ಅಗಲಿಕೆಯ ನೋವನ್ನು ಅನುಭವಿಸುವ ತಮ್ಮ ಲಲಿತಾಂಗಿಯರಿಗೆ ಸಮಾಧಾನ ಹೇಳಿ ವಿಜಯ ಲಕ್ಷ್ಮಿಯನ್ನು ವರಿಸಿ ಹಿಂತಿರುಗಿ ಬರುತ್ತೇವೆಂಬ ಭರವಸೆಗಳನ್ನು ಕೊಡುತ್ತ ಸಂತೈಸುತ್ತಾರೆ. ಮಂತ್ರಿಪ್ರಧಾನನಾದ

ಮರುಭೂತಿಯೂ ತನ್ನ ಪ್ರಿಯೆ ವಸುಂಧರೆಯನ್ನು ಸಮಾಧಾನ ಪಡಿಸುತ್ತಾನೆ. ಆ ಸಂದರ್ಭದಲ್ಲಿ ಕವಿ ಶೃಂಗಾರರಸ ಪೋಷಕವಾಗು ವಂಥ ಪದ್ಯಗಳನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಅವುಗಳಲ್ಲಿ ಒಂದು ಹೀಗಿದೆ—

ಇನಿಯಂ ಪೋದಪನೆಂದು ಬಂದಜಿಪೆ ದೀರ್ಘಶ್ವಾಸಮುಣ್ಮೆತ್ತು ಪ
ವ್ವನೆ ಪಾಜಿತ್ತೆರ್ದೆ ಗದ್ಗದಕ್ಕೆ ನುಡಿಗಳ್ ಪಕ್ಕಾದುವಾಸ್ಯಂ ಹಿಮಂ
ತನಿಪೊಕ್ಕಿರ್ದ ಸರೋರುಹಕ್ಕೆ ಸರಿಯಾಯ್ತಂಗಂ ಗುರುಗ್ರೀಷ್ಮತ
ಪ್ತನವೋದ್ಯಲ್ಲತೆಯಂತೆ ಕಂದಿತು ವಿಯೋಗೋದ್ವೇಗದಿಂ ಕಾಂತೆಯಾ ೩–೧೫

ಪಾರ್ಶ್ವಪಂಡಿತನು ತನ್ನ ಕಾವ್ಯವನ್ನು ವರ್ಣನಾ ಪ್ರಧಾನ ವನ್ನಾಗಿ ಮಾಡಿದ್ದಾನೆ ನಿಜ. ಆದರೆ ಅಲ್ಲಿ ಬರುವ ವರ್ಣನೆಗಳು ಕೇವಲ ವರ್ಣನೆಗಳಾಗಿಯೇ ಬರದೆ ಕಾವ್ಯದಲ್ಲಿ ಬರುವ ಪಾತ್ರ ಗಳೊಂದಿಗೂ ಸಾಹಚರ್ಯೆಯನ್ನು ಪಡೆದುಕೊಂಡಿವೆ ಎಂಬುದು ಗಮನಾರ್ಹವಾದುದು. ಇಲ್ಲಿ ಲತೆಗಳಿಗೂ ಲತಾಂಗಿಯರಿಗೂ ಸಾದೃಶ್ಯವನ್ನು ಕಲ್ಪಿಸಿ, ರಸಿಕರ ಮನಸ್ಸನ್ನು ತಣಿಸಿದ್ದಾನೆ.

ಮೊಗಮಲರ್ದಬ್ಜದಂತೆ ನಯನಂ ನಗುವುತ್ಪಳದಂತೆ ಮೂಗು ಸಂ
ಪಗೆಮುಗುಳಂತೆ ದಂತರುಚಿ ಮಲ್ಲಿಗೆಯಂತಧರಂ ಸಮಂತು ಬಂ
ಮುಗೆಯಲರಂತಿರೊಪ್ಪೆ ಕುಸುಮಾಯುಧ ಚಕ್ರಿಗೆ ಪಂಚಬಾಣಮಂ
ಬಗೆಗೊಳುತೀವ ಕಲ್ಪಲತೆಯಂತೆ ಲತಾಂಗಿ ಕರಂ ವಿರಾಜಿಪಳ್ ೭–೫೪

ಅಂತೆಯೇ ಋತುಗಳನ್ನು ಲತಾಂಗಿಯರಿಗೆ ಹೋಲಿಸಿ ವರ್ಣಿಸಿದ್ದಾನೆ. ಶರತ್ಕಾಲದ ವರ್ಣನೆ—

ಚಾರುತರೇಂದು ವಕ್ತ್ರೆ ಚಪಳೇಕ್ಷಣೆ ಹಂಸವಿಳಾಸಯಾನೆ ನೀ
ಹಾರಕರ ಪ್ರಭಾಂಬರೆ ಸರೋವಿಮಳಾಶಯೆ ತಾರತಾರಕಾ
ಹಾರಮರೀಚಿಪಾಂಡುರಪಯೋಧರೆ ಕಾಶಲತಾಂತಕಾಂತಿ ವಿ
ಸ್ತಾರಸಿತ ಪ್ರಧಾನೆಪೋಲೇಂ ಶರದಂಗನೆ ಕಣ್ಗೆವಂದಳೊ ೮–೨೯

ಪೆಂಗಸರನ್ನು ಮಳೆಗಾಲಕ್ಕೆ ಹೋಲಿಸಿ ವರ್ಣಿಸಿರುವ ಪದ್ಯ ಅತ್ಯಂತ ಚಮತ್ಕಾರವಾಗಿದೆ—

ತನುಗಂಧಕೆರ್ಕಗಿರ್ದ-ತುಂಬಿ ಮುಗಿಲಂ ನೇತ್ರಾಂಶು ಮಿಂಚಂ ಸುಕಾಂ
ಚನಕಾಂಚೀರುತಿ ಮೇಘನಾದಮುನಸೂನಂ ಪೋಲೆ ಲಾವಣ್ಯಾವಾ
ಹಿನಿ ಮೆಯ್ವೆರ್ಚೆ ಮನೋಜಕೇಕಿ ಕುಣಿವನ್ನಂ ಕಾರವೋಲಂಗನಾ
ಜನಮಿಾಯುತ್ತಮೆ ಬರ್ಪುದೊಪ್ಪಿ ಪುರದೊಳ್‌ಶೃಂಗಾರ ದಾಸಾರಮಂ
೭–೪೩

ಶಿಶಿರ ಋತುವಿನ ವರ್ಣನೆ ಅತ್ಯಂತ ಮನೋಜ್ಞವೂ ಅರ್ಥ ಗರ್ಭಿತವೂ ಆಗಿದೆ:

ಜಗದಪಕಾರಿ ತೀವ್ರನೆನಿಸಿರ್ದಧಿಕಾರಿ ನಿರಾಕುಳಂ ಕುಟುಂ
ಬಿಗಳ ಧನಂಗಳಂ ಕವರ್ದು ಮೇಲುದುಮಂ ಸುಗಿವಂತೆ ವೃಕ್ಷರಾ
ಜಿಗಳ ನವಪ್ರಸೂನ ಫಳಮಂ ಶಿಶಿರಾನಿಲನೀಳ್ದುಕೊಂಡು ನೆ
ಟ್ಟಗೆ ನೆಲಸಿರ್ದ ಪಣ್ಣೆಲೆಯನೆಯ್ದೆ ಕಳಲ್ಚಿದುದೆಲ್ಲಿ ನೋಡಿಪ್ಪೊಡಂ ೮–೧೧೫

ಪ್ರಕಾರಾಂತರದಿಂದ ಲಕ್ಷ್ಮೀದೇವನ ನಾಮ ನಿರ್ದೇಶನ ಮಾಡಿರುವ ಮುಂದಿನ ಪದ್ಯದಲ್ಲಿ ವಜ್ರನಾಭಿಯನ್ನು ಲಕ್ಷ್ಮೀ ದೇವನೊಂದಿಗೆ ಹೋಲಿಸಿದ್ದಾನೆಂಬ ಊಹೆಗೆ ಅವಕಾಶವಿದೆ. ಇಲ್ಲಿ ಮಂದಮಾರುತದ ವರ್ಣನೆ ಬಂದಿದೆ::

ಅನುಪಮ ಪದ್ಮವಕ್ತ್ರೆಯು ಸರೋತ್ಪಳನೇತ್ರೆಯು ಪುಷ್ಪಮಂಜರೀ
ಸ್ತನಿಯು ಲತಾಂಗಿಯಪ್ಪ ವನಲಕ್ಷ್ಮಿಯು ಯೌವನಲಕ್ಷ್ಮಿದೇವ ನಿ
ನ್ನನುಭವ ಸೌಖ್ಯದಿಂದೆ ಸಫಳಂ ಬಿಜಯಂಗೆಯುವೇಟ್ಕೆಮೆಂಬ ತ
ದ್ವನಿತೆಯ ದೂತನಂದದೊಳೆ ಬಂದುದು ನಂದನ ಮಂದಮಾರುತಂ ೯–೮೭.

ರಕ್ತಾನದಿಯಲ್ಲಿ ಅನುರಕ್ತನಾದ ರಾಜನು ಜಲಕೇಳಿಯನ್ನು ಆಡುವ ಸಂದರ್ಭದಲ್ಲಿ ಬಂದಿರುವ ಈ ಕೆಳಗಿನ ಪದ್ಯ ಕವಿಯು ರನ್ನನನ್ನು ಅನುಕರಿಸಿರುವುದನ್ನು ತೋರಿಸುತ್ತದೆ:

ವಾರಿಯು ಬೞಿಯುನೆ ಸವತಿಯ
ತೋರಿದುವೆನಿಸಿರ್ದ ಮೊಲೆಯ ಮೇಲಧಿಪನ ಕ
ಣ್ಣೀರಂತೆ ಪರಿದು ನೆಲಸಿರೆ
ನೀರೊಳಗಿರ್ದುಂ ಬೆಮರ್ತಳೊರ್ವಳ್ ಮುಳಿಸಿಂ ೯–೧೩೩

ಪಾರ್ಶ್ವಪಂಡಿತನ ದೇಸಿ ಹಾಗೂ ಮಾರ್ಗಶೈಲಿಗೆ ಒಂದೊಂದು ಪದ್ಯವನ್ನು ಗಮನಿಸಬಹುದು. ಅರವಿಂದ ಮಹಾರಾಜನ ಮಂತ್ರಿ ಪ್ರಧಾನನಾದ ಮರುಭೂತಿಯಿಂದ ಕಳುಹಿಸಲ್ಪಟ್ಟ ನಯಕೋವಿದ ನಾದ ದೂತನು ವಜ್ರವೀರನನ್ನು ಕುರಿತು ಈ ರೀತಿ ಹೇಳುತ್ತಾನೆ:

ಕುಡುವುದು ಕಪ್ಪಮಂ ನಡೆವುದಾಳ್ವೆಸದಿಂದಮೆ ಮುನ್ನಿನಂದದಿಂ
ಬಿಡುವುದು ದರ್ಪಮಂ ಪಡೆವುದಾಳ್ದನದೊಂದು ಮನಃ ಪ್ರಸಾದಮಂ
ತಡೆವುದು ಬುದ್ಧಿಯಲ್ತಧಿಕನಪ್ಪವನೊಳ್ ಬಳಹೀನನಪ್ಪವಂ
ತೊಡರ್ದೊಡೆ ಕೇಡು ತಪ್ಪದೆನುತುಂ ನುಡಿದಂ ನಯಶಕ್ತಿಕೋವಿದಂ ೨–೫೬

ತನ್ನನ್ನು ಅಧಃಕರಿಸಿದ ದೂತನ ಮಾತನ್ನು ಕೇಳಿದ ವಜ್ರವೀರ ನಿಗೆ ಬಂದ ಕೋಪವನ್ನು ವರ್ಣಿಸುತ್ತಾನೆ—

ಘನದೂತೋಕ್ತಿಸಮೀರಣ ಪ್ರಚಳಿತಂ ಸ್ಥೂಳಾಯತಶ್ಮಶ್ರುಲೇ
ಖೆ ನವೀನೋದ್ಧತಧೂಮಲೇಖೆ ನಯನೋದ್ಯಚ್ಛೋಣಿಮಂ ಜ್ವಾಳೆ ಸಂ
ಜನಿತ ಸ್ವೇದ ಜಲಂ ಘೃತಾಹುತಿಯೆನಿಪ್ಪನಂ ಸ್ವವಂಶಪ್ರಣಾ
ಶನದಾವಾಗ್ನಿವೊಲುರ್ವಿಕೊರ್ವಿದುದು ಭೂಪಾಳಂಗೆ ಕೋಪಾನಳಂ ೨–೫೯

ಕವಿಯು ಸಂಸ್ಕೃತ ಭೂಯಿಷ್ಠ ಗದ್ಯ ಶೈಲಿಗೆ ಒಂದುಸಣ್ಣ ಉದಾ :

ವ॥ ಅಂತು ಸಮುಸ್ತಾಂತಃಪುರ ಪುರಂಧ್ರೀ ನೀರಂಧ್ರಘನಸ್ತ ನೋದಾರಹಾರವಾರವಿಳಾಸಿನೀ ಸಮೇತಂ ನೀತಿ ನಿಧಾನ ಪ್ರಧಾನ ಪ್ರಮುಖನಿಖಿಳಪರಿವಾರ ಪರೀತನುತ್ತುಂಗಸಿಂಹಾಸನಾಸೀನನಾ ಸ್ಥಾನ ಮಂಡಳ ಮಧ್ಯಮನಲಂಕರಿಸಿ...

ಅಲ್ಲದೆ ಕವಿ ತನ್ನ ಗ್ರಂಥದ ಉದ್ದಕ್ಕೂ ಕನ್ನಡ ಗಾದೆ ಮಾತುಗಳನ್ನು ಸಂಸ್ಕೃತ ಸೂಕ್ತಿಗಳನ್ನು ಸಂದರ್ಭೋಚಿತವಾಗಿ ಬಳಸಿ ಆಯಾ ಸಂದರ್ಭ ಸನ್ನಿವೇಶಗಳು ಸುಲಭಗ್ರಾಹ್ಯವಾಗುವಂತೆ ಮಾಡುವುದರ ಜೊತೆಗೆ ತನ್ನ ಲೋಕಾನುಭವದ ಪರಿಚಯವನ್ನು ಮಾಡಿಕೊಟ್ಟಿದ್ದಾನೆ. ಕಥಾಭಾಗದಲ್ಲಿ ಇಂಥ ವಾಕ್ಯಗಳನ್ನು ಯಥೋಚಿತವಾಗಿ ಉದ್ಧರಿಸಲಾಗಿದೆ. ಇನ್ನೂ ವಿಪುಲವಾದ ಇಂಥ ವಾಕ್ಯಗಳನ್ನು ಕಾವ್ಯದ ಉದ್ದಕ್ಕೂ ಗಮನಿಸಬಹುದು ಜೊತೆಗೆ ತನ್ನ ಗ್ರಂಥದಲ್ಲಿ ಅಪೂರ್ವವಾದ ಪದಗಳನ್ನು ಬೇಕಾದಷ್ಟು ಬಳಸಿದ್ದಾನೆ.

# ಗ್ರಂಥಋಣ


೧. ಪಾರ್ಶ್ವನಾಥ ಪುರಾಣ—ಸಂ. ಬೊಮ್ಮರಸಪಂಡಿತರು, ೧೯೫೭

೨. ಕಲ್ಹೊಳಿ ಶಾಸನ—ಸಂ. ಆರ್. ಎನ್. ಗುರುವ, ಕ.ಭಾ. ೬–೩ ಜನವರಿ, ೧೯೭೪.

೩. ಕನ್ನಡ ಸಂಸ್ಕೃತಿ—ಪ್ರೊ. ಎಂ. ಮರಿಯಪ್ಪಭಟ್.

೪. ಕನ್ನಡ ಸಾಹಿತ್ಯ ಚರಿತ್ರೆ—೪ನೇ ಸಂಪುಟ, ಕ.ಅ.ಸಂ. ಮೈಸೂರು ವಿಶ್ವವಿದ್ಯಾನಿಲಯ.

೫. Tirthankara Parsvanatha-A Study– Ed : Dr. T. G. Kalaghatagi

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ